ಎಲ್ಲರಿಗೂ ಶಿಕ್ಷಣ - ಮಧ್ಯ-ದಶಕದ ಮೌಲ್ಯಮಾಪನ

# ಭಾರತದಲ್ಲಿ ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣ

**ವನಿತಾ ಕೌಲ್**

**ದೀಪಾ ಶಂಕರ್**

ರಾಷ್ಟ್ರೀಯ ಶೈಕ್ಷಣಿಕ ಯೋಜನೆ ಮತ್ತು ಆಡಳಿತ ವಿಶ್ವವಿದ್ಯಾಲಯ
ನವ ದೆಹಲಿ

# ಮುನ್ನುಡಿ

ಜಾಗತಿಕ ಶಿಕ್ಷಣ ವೇದಿಕೆಯು, ಸೆನೆಗಲ್ ದೇಶದ ಡಾಕರ್ ನಲ್ಲಿ, ಆರು ಗುರಿಗಳೊಂದಿಗೆ 2015ಹೊತ್ತಿಗೆ ಸಾಧಿಸಬೇಕಾದ ಎಲ್ಲರಿಗೂ ಶಿಕ್ಷಣ (EFA)ದ ಸಮಗ್ರ ದೃಷ್ಟಿಕೋನವನ್ನು ಅಂಗೀಕರಿಸಿತ್ತು. ಈ ಆರು ಗುರಿಗಳು ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣ, ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ, ಲಿಂಗ, ಯುವ ಮತ್ತು ತರುಣಾವಸ್ಥೆಯವರು, ವಯಸ್ಕ ಶಿಕ್ಷಣ ಮತ್ತು ಗುಣಮಟ್ಟದ ಶಿಕ್ಷಣದ ಕ್ಷೇತ್ರಗಳಿಗೆ ಸಂಬಂಧಿಸಿದ್ದವು. ಶಿಕ್ಷಣವನ್ನು ಎಲ್ಲರಿಗೂ ತಲುಪಿಸುವುದನ್ನು ಖಾತರಿಪಡಿಸುವುದಕ್ಕಾಗಿ 'ತಲುಪದವರಿಗೆ ಶಿಕ್ಷಣ ತಲುಪಿಸುವುದು' ಇಲ್ಲಿನ ಮುಖ್ಯ ಉದ್ದೇಶವಾಗಿದೆ. ಈ ಹಿನ್ನೆಲೆಯಲ್ಲಿ, EFA ಗುರಿಗಳಿಗೆ ಸಂಬಂಧಿಸಿದಂತೆ ಮಾಡಲಾದ ಪ್ರಗತಿಯನ್ನು ಪರಿಶೀಲಿಸುವುದಕ್ಕಾಗಿ 'ಎಲ್ಲರಿಗೂ ಶಿಕ್ಷಣದ ಮಧ್ಯ-ದಶಕದ ಮೌಲ್ಯಮಾಪನ'ಕ್ಕೆ ಚಾಲನೆ ನೀಡಲಾಯಿತು. ಈ ಪ್ರಕ್ರಿಯೆಗೆ ಅನುರೂಪವಾಗಿ, ಭಾರತ ಸರ್ಕಾರ ಮತ್ತು ರಾಷ್ಟ್ರೀಯ ಶೈಕ್ಷಣಿಕ ಯೋಜನೆ ಮತ್ತು ಆಡಳಿತ ವಿಶ್ವವಿದ್ಯಾಲಯವು (NUEPA) ಜಂಟಿಯಾಗಿ 'ಭಾರತದಲ್ಲಿ ಎಲ್ಲರಿಗೂ ಶಿಕ್ಷಣ'ದ ಪ್ರಗತಿಯ ಸಮಗ್ರ ಪರಿಶೀಲನೆಯನ್ನು ಮಾಡಿತು.

ರಾಷ್ಟ್ರೀಯ ವರದಿಯ ಮುಂದಿನ ಭಾಗವಾಗಿರುವ ಪ್ರಸ್ತುತ ಬರಹವು ವಿಷಯಾಧಾರಿತ ಮತ್ತು ರಾಜ್ಯಗಳ ಪರಿಶೀಲನಾ ಪ್ರಬಂಧಗಳ ಸರಣಿಗಳನ್ನು ಒಳಗೊಂಡಿದೆ. ಆರು ಗುರಿಗಳನ್ನು ಒಳಗೊಂಡು ಒಂಬತ್ತು ವಿಷಯಾಧಾರಿತ ಪರಿಶೀಲನಾ ಪ್ರಬಂಧಗಳಿದ್ದು ಮೂರು ಇತರ ವಿಷಯಗಳ ಕುರಿತು ಮೂರು ಹೆಚ್ಚುವರಿ ಪ್ರಬಂಧಗಳಿವೆ. ಅವೆಂದರೆ, ಶಿಕ್ಷಕರು ಮತ್ತು ಶಿಕ್ಷಕ ಶಿಕ್ಷಣ, EFA ಗಾಗಿ ಆಡಳಿತ ಕಾರ್ಯತಂತ್ರಗಳು ಮತ್ತು ಭಾರತದಲ್ಲಿ EFA ಗಾಗಿ ಹಣಕಾಸು ಒದಗಿಸುವುದು. ಈ ವಿಷಯಾಧಾರಿತ ಪರಿಶೀಲನಾ ಪ್ರಬಂಧಗಳನ್ನು ವಿಶ್ಲೇಷಣಾತ್ಮಕ ಪ್ರಬಂಧಗಳ ಸರಣಿಗಳು ಅನುಸರಿಸುತ್ತಿದ್ದು, ಭಾರತದ ಇಪ್ಪತ್ತೇಳು ರಾಜ್ಯಗಳಲ್ಲಿ EFA ಗೆ ಸಂಬಂಧಿಸಿದಂತೆ ಮಾಡಲಾಗಿರುವ ಪ್ರಗತಿಯ ಮೇಲೆ ಇವು ಬೆಳಕು ಚೆಲ್ಲುತ್ತವೆ. ರಾಜ್ಯಗಳ ಪರಿಶೀಲನೆಗಳು, EFA ಗುರಿಗಳನ್ನು ಸಾಧಿಸಲು ಒಳಗೊಂಡಿರುವ ಕೆಲಸದ ಪ್ರಮಾಣದ ಮೌಲ್ಯಮಾಪನ ಮಾಡುವುದರ ಮೂಲಕ ಹಾಗೂ ಈ ಗುರಿಗಳನ್ನು ಸಾಧಿಸಲು ಬೇಕಾಗಿರುವ ನೈಜ ಸಮಯ ಮಿತಿ ಮತ್ತು ಕಾರ್ಯತಂತ್ರಗಳನ್ನು ಮುನ್ನಂದಾಜು ಮಾಡುವುದರ ಮೂಲಕ ಭಾರತದ ಪ್ರತಿ ರಾಜ್ಯದಲ್ಲಿ ಸಾಧಿಸಲಾಗಿರುವ ಪ್ರಗತಿಯ ಪ್ರಸ್ತುತ ಮಟ್ಟದ ಸಂಕ್ಷಿಪ್ತ ಚಿತ್ರಣವನ್ನು ಕೊಡಲು ಪ್ರಯತ್ನಿಸುತ್ತವೆ. ಪ್ರತಿ ವಿಷಯಾಧಾರಿತ ಪರಿಶೀಲನೆ ಮತ್ತು ರಾಜ್ಯಗಳಿಗೆ ಸಂಬಂಧಿಸಿದ ವಿಶ್ಲೇಷಣಾತ್ಮಕ ಪರಿಶೀಲನಾ ಪ್ರಬಂಧವನ್ನು, ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಒಟ್ಟುಗೂಡಿದ ಸಹಯೋಗದೊಂದಿಗೆ ಸಂಬಂಧಿತ ಕ್ಷೇತ್ರ/ ರಾಜ್ಯಕ್ಕೆ ಕುರಿತಂತೆ ಸಾಕಷ್ಟು ಜ್ಞಾನ ಹೊಂದಿರುವ ತಜ್ಞರು ಸಿದ್ಧಪಡಿಸಿದ್ದಾರೆ.

ರಾಷ್ಟ್ರೀಯ ವರದಿಯೊಂದಿಗೆ ಪರಿಶೀಲನಾ ಪ್ರಬಂಧಗಳು ದೇಶದಲ್ಲಿ EFA ಗುರಿಗಳತ್ತ ಮಾಡಲಾಗಿರುವ ಪ್ರಗತಿಯ ಸಮಗ್ರ ಮತ್ತು ವಿಂಗಡಿಸಲಾದ ಚಿತ್ರಣವನ್ನು ನೀಡುತ್ತವೆ. ಶಿಕ್ಷಣವನ್ನು ಎಲ್ಲಾ ಮಕ್ಕಳ ಮೂಲಭೂತ ಹಕ್ಕಾಗಿ ಪರಿಗಣಿಸಲು ಶಾಸನವನ್ನು

ರೂಪಿಸುವುದಕ್ಕಾಗಿ ಸಂಸತ್ತು ಚರ್ಚೆಯಲ್ಲಿ ತೊಡಗಿರುವ ಸಂದರ್ಭದಲ್ಲೇ ಈ ಪ್ರಬಂಧಗಳು ಹೊರಬರುತ್ತಿವೆ. ವಿಷಯಾಧಾರಿತ ಪ್ರಬಂಧಗಳು EFA ಯ ವಿವಿಧ ಗುರಿಗಳಿಗೆ ಸಂಬಂಧಿಸಿದಂತೆ ಆಗಿರುವ ಶೈಕ್ಷಣಿಕ ಬೆಳವಣಿಗೆಯ ಸ್ಥಿತಿಗತಿಯ ಮೇಲೆ ಬೆಳಕು ಚೆಲ್ಲಿದರೆ, ರಾಜ್ಯಗಳಿಗೆ ಸಂಬಂಧಿಸಿದ ಪ್ರಬಂಧಗಳು ದೇಶದಾದ್ಯಂತ ಇರುವ ಸನ್ನಿವೇಶದ ವೈವಿಧ್ಯತೆಯನ್ನು ಕಟ್ಟಿ ಕೊಡುತ್ತವೆ. ಇಡೀ ಸರಣಿಯು, ಸಂಬಂಧಿತ ಪ್ರಾಯೋಗಿಕ ಸಂಶೋಧನೆಯ ಪರಿಶೀಲನೆಯೊಂದಿಗೆ ಅಧಿಕೃತ ದತ್ತಾಂಶವನ್ನು ಬಳಸಿಕೊಂಡು ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣದಿಂದ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ ಮತ್ತು ವಯಸ್ಕ ಸಾಕ್ಷರತೆ ಕಾರ್ಯಕ್ರಮಗಳ ತನಕ EFA ಯ ವಿವಿಧ ಅಂಶಗಳ ಕುರಿತು ಅಮೂಲ್ಯ ಸ್ವತಂತ್ರ ದಾಖಲೀಕರಣವಾಗಿ ನೆರವಾಗುತ್ತದೆ.

ವಿಷಯಾಧಾರಿತ ಮತ್ತು ರಾಜ್ಯಗಳ ವಿಶ್ಲೇಷಣಾತ್ಮಕ ಪರಿಶೀಲನಾ ಪ್ರಬಂಧಗಳ ಸರಣಿಯೊಂದಿಗೆ ರಾಷ್ಟ್ರೀಯ ವರದಿಯನ್ನು ಒಳಗೊಂಡಿರುವ ಈ ಇಡೀ ಯೋಜನೆಗೆ ಪ್ರೊ. ಆರ್. ಗೋವಿಂದ, NUEPA, ಅವರು ರೂಪುರೇಷೆ ಒದಗಿಸಿ ಕಾರ್ಯಗತಗೊಳಿಸಿದ್ದಾರೆ ಹಾಗೂ ಇಡೀ ಕಾರ್ಯವನ್ನು ಇವರು ಮುನ್ನಡೆಸಿದ್ದು, ಅವರ ನಾಯಕತ್ವಕ್ಕಾಗಿ ಹೃದಯದ ಅಂತರಾಳದಿಂದ ಅವರಿಗೆ ಧನ್ಯವಾದವನ್ನು ಸಮರ್ಪಿಸುತ್ತೇನೆ. NUEPA ಯಲ್ಲಿ ಯೋಜನಾ ತಂಡದಲ್ಲಿದ್ದು ಇಡೀ ಕಾರ್ಯಕ್ಕೆ ವಿಶೇಷ ಕೊಡುಗೆ ನೀಡಿದ ಡಾ. ಮೋನಾ ಸೆಡ್ವಾಲ್ ಅವರೂ ಸಹ ಪ್ರಶಂಸಾರ್ಹರು. ಇಡೀ ಕಾರ್ಯಕ್ಕೆ ಮಾರ್ಗದರ್ಶನ ನೀಡುವುದಕ್ಕಾಗಿ ಪ್ರೊ. ಎ.ಕೆ ಶರ್ಮಾ ಅವರ ಅಧ್ಯಕ್ಷತೆಯಲ್ಲಿ ರೂಪಿಸಲಾದ ತಾಂತ್ರಿಕ ಸಲಹಾ ಗುಂಪಿನ ಸಲಹೆಯಿಂದಾಗಿ ತಂಡಕ್ಕೆ ಸಾಕಷ್ಟು ಪ್ರಯೋಜನ ದೊರೆತಿದೆ. ಪ್ರೊ. ಎ.ಕೆ ಶರ್ಮಾ ಅವರ ಅಮೂಲ್ಯ ಮಾರ್ಗದರ್ಶನಕ್ಕಾಗಿ ಅವರಿಗೆ ಮನದಾಳದಿಂದ ನನ್ನ ಧನ್ಯವಾದ ಹಾಗೂ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ. ಅಂತಿಮವಾಗಿ, ಹಣಕಾಸಿನ ಉದಾರ ನೆರವು ಒದಗಿಸಿದ UNICEF ಮತ್ತು UNESCO ಗೆ ನಾನು ಚಿರಋಣಿ.

**ವೇದ ಪ್ರಕಾಶ್**
**ಉಪಕುಲಪತಿ**
**ರಾಷ್ಟ್ರೀಯ ಶೈಕ್ಷಣಿಕ ಯೋಜನೆ ಮತ್ತು ಆಡಳಿತ ವಿಶ್ವವಿದ್ಯಾಲಯ**

# ಸಂಪಾದಕೀಯ ಟಿಪ್ಪಣಿ

ಭಾರತೀಯ ಸಂವಿಧಾನವು, 14 ವರ್ಷ ವಯಸ್ಸಿನ ತನಕದ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಒದಗಿಸಬೇಕೆಂದು ಸರ್ಕಾರಕ್ಕೆ ನಿರ್ದೇಶನ ನೀಡುತ್ತದೆ. ಅನುಕ್ರಮ ಅಭಿವೃದ್ಧಿ ಯೋಜನೆಗಳ ಮೂಲಕ ಸುಮಾರು ಆರು ದಶಕಗಳ ಕಾಲ ಈ ಗುರಿಯನ್ನು ದೇಶವು ಈಡೇರಿಸುತ್ತಾ ಬಂದಿದೆ. ಕಳೆದ ಎರಡು ದಶಕಗಳಲ್ಲಿ, ಹೂಡಿಕೆಯಲ್ಲಿ ಸಾಕಷ್ಟು ಹೆಚ್ಚಳದೊಂದಿಗೆ ಶಿಕ್ಷಣದಲ್ಲಿ ಮಕ್ಕಳ ಪಾಲ್ಗೊಳ್ಳುವಿಕೆಯಲ್ಲಿ ಗಣನೀಯ ಪ್ರಮಾಣದ ಸುಧಾರಣೆ ಕಾಣಬಹುದಾಗಿದೆ. ಶಿಕ್ಷಣದ ಕರ ವಿಧಿಸುವ ಮೂಲಕ ಈ ವಲಯಕ್ಕೆ ಸಂಪನ್ಮೂಲಗಳನ್ನು ಕ್ರೋಢೀಕರಿಸುವ ಇತ್ತೀಚಿನ ಪ್ರಯತ್ನವು ಈ ದಿಸೆಯಲ್ಲಿ ಪ್ರಮುಖ ಪ್ರಯತ್ನ ಎನಿಸಿದೆ. ಸಾಂಪ್ರದಾಯಿಕವಾಗಿ ಶಾಲಾ ಶಿಕ್ಷಣವು ರಾಜ್ಯ ಸರ್ಕಾರಗಳ ಕ್ರಿಯಾ ವಿಷಯವಾಗಿ ಉಳಿದುಕೊಂಡಿದ್ದರೂ, ಶಿಕ್ಷಣದ ಕುರಿತ ರಾಷ್ಟ್ರೀಯ ನೀತಿ – 1986ರ ನಂತರ ಭಾರತ ಸರ್ಕಾರವು ಈ ನಿಟ್ಟಿನಲ್ಲಿ ಕಳೆದ ಎರಡು ದಶಕಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸಿದೆ. ಇದರ ಪರಿಣಾಮವಾಗಿ 2001ರಲ್ಲಿ ಸರ್ವ ಶಿಕ್ಷಾ ಅಭಿಯಾನವೆಂಬ ರಾಷ್ಟ್ರೀಯ ಕಾರ್ಯಕ್ರಮಕ್ಕೆ ಚಾಲನೆ ನೀಡಲಾಯಿತು. ಈ ಎಲ್ಲಾ ಪ್ರಯತ್ನಗಳ ಹೊರತಾಗಿಯೂ ಎಲ್ಲರಿಗೂ ಗುಣಮಟ್ಟದ ಶಿಕ್ಷಣವನ್ನು ಒದಗಿಸುವ ಅಂತಿಮ ಗುರಿ ಇನ್ನೂ ಮರೀಚಿಕೆಯಾಗಿಯೇ ಉಳಿದಿದೆ.

ಡಾಕರ್ ಕ್ರಿಯಾ ಚೌಕಟ್ಟಿನ ಅಡಿಯಲ್ಲಿ 2015ರೊಳಗೆ ಎಲ್ಲರಿಗೂ ಗುಣಮಟ್ಟದ ಶಿಕ್ಷಣ ಒದಗಿಸುವುದಕ್ಕಾಗಿ ಮಾಡಲಾದ ಬದ್ಧತೆ ಸೇರಿದಂತೆ ಅನೇಕ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಬೆಳವಣಿಗೆಗಳ ಕಾರಣ ಇತ್ತೀಚಿನ ವರ್ಷಗಳಲ್ಲಿ ಈ ಗುರಿಯನ್ನು ಮುಟ್ಟಬೇಕಾದ ತುರ್ತು ಅಗತ್ಯತೆಯನ್ನು ಎತ್ತಿ ಹಿಡಿಯಲಾಗಿದೆ. ಡಾಕರ್ ಕ್ರಿಯಾ ಚೌಕಟ್ಟು ಪ್ರಾಥಮಿಕ ಶಿಕ್ಷಣವನ್ನು ಒಳಗೊಂಡಿರುವುದು ಮಾತ್ರವಲ್ಲದೆ ಸಾಕ್ಷರತೆಯ ಗುರಿಗಳು, ಲಿಂಗ ಸಮಾನತೆ ಮತ್ತು ಗುಣಮಟ್ಟದ ಕುರಿತ ಕಾಳಜಿಯ ಮೇಲೂ ಸಹ ಗಮನ ಹರಿಸುತ್ತದೆ. ಡಾಕರ್ ಕ್ರಿಯಾ ಚೌಕಟ್ಟು, ಎಲ್ಲಾ ದೇಶಗಳು ಸಾಧಿಸುವುದಕ್ಕಾಗಿ ಈ ಕೆಳಗಿನ ಆರು ನಿರ್ದಿಷ್ಟ ಗುರಿಗಳನ್ನು ಪಟ್ಟಿ ಮಾಡಿತು.

1. ಮುಖ್ಯವಾಗಿ ಅತ್ಯಂತ ದುರ್ಬಲ ಮತ್ತು ಅನನುಕೂಲತೆಗೆ ಒಳಗಾಗಿರುವ ಮಕ್ಕಳಿಗಾಗಿ ಸಮಗ್ರ ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣವನ್ನು ವಿಸ್ತರಿಸುವುದು ಮತ್ತು ಸುಧಾರಿಸುವುದು.
2. ಎಲ್ಲಾ ಮಕ್ಕಳು, ಮುಖ್ಯವಾಗಿ ಹುಡುಗಿಯರು, ಕಷ್ಟಕರ ಸನ್ನಿವೇಶಗಳಲ್ಲಿರುವ ಮಕ್ಕಳು, ಜನಾಂಗೀಯ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿರುವ ಮಕ್ಕಳು 2015ರೊಳಗೆ ಉತ್ತಮ ಗುಣಮಟ್ಟದ ಸಂಪೂರ್ಣ ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣ ಪಡೆಯುವುದನ್ನು ಖಚಿತಪಡಿಸುವುದು.
3. ಸೂಕ್ತ ಕಲಿಕೆ ಮತ್ತು ಜೀವನ ಕೌಶಲ್ಯ ಕಾರ್ಯಕ್ರಮಗಳಿಗೆ ಸಮಾನ ಅವಕಾಶ ಒದಗಿಸುವ ಮೂಲಕ ಎಲ್ಲಾ ಯುವ ಜನರು ಮತ್ತು ವಯಸ್ಕರ ಕಲಿಕಾ ಅಗತ್ಯತೆಗಳನ್ನು ಖಾತರಿಪಡಿಸುವುದು.

4. ವಯಸ್ಕರ ಸಾಕ್ಷರತೆ ಮಟ್ಟದಲ್ಲಿ, ಮುಖ್ಯವಾಗಿ ಮಹಿಳೆಯರಲ್ಲಿ, 2015ರೊಳಗೆ 50 ಶೇಕಡಾದಷ್ಟು ಸುಧಾರಣೆ ಸಾಧಿಸುವುದು ಮತ್ತು ಎಲ್ಲಾ ವಯಸ್ಕರಿಗೆ ಮೂಲಭೂತ ಮತ್ತು ಮುಂದುವರಿಕೆ ಶಿಕ್ಷಣಕ್ಕೆ ಸಮಾನ ಅವಕಾಶವನ್ನು ಖಚಿತಪಡಿಸುವುದು.
5. ಉತ್ತಮ ಗುಣಮಟ್ಟದ ಮೂಲಭೂತ ಶಿಕ್ಷಣಕ್ಕೆ ಹುಡುಗಿಯರಿಗೆ ಸಂಪೂರ್ಣ ಮತ್ತು ಸಮಾನ ಅವಕಾಶ ಮತ್ತು ಸಾಧನೆಯನ್ನು ಖಚಿತಪಡಿಸಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದಲ್ಲಿ 2005ರೊಳಗೆ ಲಿಂಗ ಅಸಮಾನತೆಯನ್ನು ತೊಡೆದು ಹಾಕುವುದು ಮತ್ತು 2015ರೊಳಗೆ ಶಿಕ್ಷಣದಲ್ಲಿ ಲಿಂಗ ಸಮಾನತೆಯನ್ನು ಸಾಧಿಸುವುದು.
6. ಮುಖ್ಯವಾಗಿ ಸಾಕ್ಷರತೆ, ಸಂಖ್ಯಾ ಜ್ಞಾನ ಮತ್ತು ಅಗತ್ಯ ಜೀವನ ಕೌಶಲ್ಯಗಳಿಗೆ ಸಂಬಂಧಿಸಿದಂತೆ ಎಲ್ಲರಲ್ಲಿಯೂ ಗುರುತಿಸಬಹುದಾದ ಮತ್ತು ಅಳೆಯಬಹುದಾದ ಕಲಿಕಾ ಫಲಿತಾಂಶಗಳನ್ನು ಸಾಧಿಸುವುದಕ್ಕಾಗಿ ಶಿಕ್ಷಣದ ಗುಣಮಟ್ಟದ ಪ್ರತಿ ಅಂಶದಲ್ಲಿ ಸುಧಾರಣೆ ತರುವುದು ಮತ್ತು ಅವುಗಳ ಉತ್ಕೃಷ್ಟತೆಯನ್ನು ಖಚಿತಪಡಿಸುವುದು.

ಭಾರತದಲ್ಲಿ ಎಲ್ಲರಿಗೂ ಶಿಕ್ಷಣಕ್ಕಾಗಿ ರಾಷ್ಟ್ರೀಯ ಕ್ರಿಯಾ ಯೋಜನೆಯು (2002), ಅಂತರಾಷ್ಟ್ರೀಯ ಸಮಯಮಿತಿಗೆ ಸಾಕಷ್ಟು ಮುಂಚೆಯೇ ಈ ಗುರಿಯನ್ನು ತಲುಪಲು ಪ್ರಸ್ತಾಪಿಸುವ ಮೂಲಕ ದೇಶದೊಳಗೆ ಈ ತುರ್ತು ಅಗತ್ಯತೆಯ ಪ್ರಜ್ಞೆಯನ್ನು ಪ್ರತಿಫಲಿಸಿದೆ. ರಾಷ್ಟ್ರೀಯ ಮಟ್ಟದಲ್ಲಿ, 6-14 ವಯೋವರ್ಗದವರಿಗೆ ಶಿಕ್ಷಣವನ್ನು ಪ್ರಾಥಮಿಕ ಶಿಕ್ಷಣ ಮಟ್ಟಕ್ಕೆ ಅನುರೂಪವಾಗಿ ಮೂಲಭೂತ ಹಕ್ಕಾಗಿ ಘೋಷಿಸಿ 2002ರಲ್ಲಿ ಸಾಂವಿಧಾನಿಕ ತಿದ್ದುಪಡಿ ಮಾಡಿದ ಕಾರಣ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣದ (UEE) ವಿಚಾರವನ್ನು ಒಂದು ಪ್ರಮುಖ ಸಾರ್ವಜನಿಕ ವಿಷಯವನ್ನಾಗಿಸಿದೆ. ಸಾಂವಿಧಾನಿಕ ನಿಬಂಧನೆಯನ್ನು ವಾಸ್ತವಿಕತೆಯಾಗಿ ಪರಿವರ್ತಿಸುವುದಕ್ಕಾಗಿ ಈ ಹಕ್ಕನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದಕ್ಕಾಗಿ ಈ ದೇಶವು ಶಾಸನವನ್ನು ರೂಪಿಸುವ ಪ್ರಕ್ರಿಯೆಯಲ್ಲಿದೆ. ಇತ್ತೀಚಿನ ವರ್ಷಗಳಲ್ಲಿ ಮಾಡಿರುವ ಪ್ರಗತಿಯ ಕಾರಣ ಈ ಗುರಿಯನ್ನು 2015ರ ಅಂತರಾಷ್ಟ್ರೀಯ ಸಮಯ ಮಿತಿಯೊಳಗೆ ಸಾಧಿಸಬಹುದು ಎಂಬಂತೆ ಕಾಣಿಸುತ್ತಿದೆ. ಆದರೆ ಇದಕ್ಕೆ ವಿವಿಧ ಗುರಿಗಳ ವ್ಯವಸ್ಥಿತ ಮೌಲ್ಯಮಾಪನದ ಅಗತ್ಯವಿದೆ. ಪ್ರಸ್ತುತ ಪ್ರಕ್ರಿಯೆಯು ಇಂತಹ ಪ್ರಯತ್ನಗಳಲ್ಲಿ ಒಂದಾಗಿದೆ.

UNESCO ಸಂಸ್ಥೆಯು 'Global Monitoring Report (ಗ್ಲೋಬಲ್ ಮಾನಿಟರಿಂಗ್ ರಿಪೋರ್ಟ್)' ಮೂಲಕ EFA ಗುರಿಯತ್ತ ಸಾಗುವಲ್ಲಿ ಮಾಡಿರುವ ಪ್ರಗತಿಯ ವಾರ್ಷಿಕ ಪರಿಶೀಲನೆಯನ್ನು ಹೊರ ತರುತ್ತಾ ಬಂದಿದೆ. ಈ ಮೌಲ್ಯಮಾಪನಗಳು ಭಾರತೀಯ ಸನ್ನಿವೇಶದ ಕುರಿತು ತೃಪ್ತಿಕರ ಚಿತ್ರಣವನ್ನು ಪ್ರತಿಫಲಿಸುತ್ತಿಲ್ಲ. ರಾಷ್ಟ್ರೀಯ ನಾಯಕತ್ವಕ್ಕೆ ಇದೊಂದು ಗಂಭೀರ ಸಮಸ್ಯೆ ಎಂದು ಇಲ್ಲಿ ಎದ್ದು ಕಾಣುತ್ತಿದೆ. ಏಕೆಂದರೆ ಆರನೇ ಒಂದರಷ್ಟು ಜಾಗತಿಕ ಜನಸಂಖ್ಯೆಯು ಭಾರತದಲ್ಲಿ ವಾಸಿಸುತ್ತಿದೆ. ಸುಮಾರು 65% ವಯಸ್ಕ ಸಾಕ್ಷರ ದರದೊಂದಿಗೆ ದೇಶದಲ್ಲಿ ಸರಿಸುಮಾರು 350 ಮಿಲಿಯದಷ್ಟು ವಯಸ್ಕ ಅನಕ್ಷರಸ್ಥರು ಭಾರತದಲ್ಲಿದ್ದಾರೆ. EFA ಸವಾಲನ್ನು ಎದಿರಿಸುವುದರಲ್ಲಿ ಯಾವುದೇ ಪ್ರಯತ್ನಗಳನ್ನು ಮಾಡಿಲ್ಲ ಎಂಬುದಾಗಿ ನಾವಿದನ್ನು ಪರಿಗಣಿಸಬಾರದು. ಅಲ್ಲದೆ, ರಾಷ್ಟ್ರೀಯ ಸರಾಸರಿಗಳು, ಭಾರತದ ಶೈಕ್ಷಣಿಕ ಪ್ರಗತಿಯನ್ನು ತೋರಿಸುವ ವೈವಿಧ್ಯಮಯ ವಾಸ್ತವಿಕತೆಯನ್ನು ಸಂಪೂರ್ಣವಾಗಿ ಪ್ರತಿಫಲಿಸುತ್ತಿಲ್ಲ. ಆದರೆ ವಿರೋಧಾಭಾಸದ ವಿಚಾರವೇನೆಂದರೆ, ದೇಶದ ಕೆಲವು ಭಾಗಗಳು ಜ್ಞಾನವುಳ್ಳ ಸಮಾಜವನ್ನು ರೂಪಿಸುವಲ್ಲಿ ಅಂತರಾಷ್ಟ್ರೀಯ ತಾಣಗಳಾಗಿ ರೂಪುಗೊಳ್ಳುತ್ತಿದ್ದರೆ, ಕೆಲವು ಇತರ ಪ್ರದೇಶಗಳು ಮತ್ತು ಜನಸಂಖ್ಯೆಯ ಭಾಗಗಳು ಮೂಲಭೂತ ಶಿಕ್ಷಣದಿಂದಲೂ ವಂಚಿತವಾಗಿವೆ. EFA ಗುರಿಯನ್ನು ಸಾಧಿಸುವ ನಿಟ್ಟಿನಲ್ಲಿ

ದೇಶದ ಎಲ್ಲಾ ರಾಜ್ಯಗಳು ಮತ್ತು ಪ್ರದೇಶಗಳು ಒಂದೇ ಮಟ್ಟದಲ್ಲಿ ಇಲ್ಲ ಎಂಬುದು ಸ್ಪಷ್ಟವಾಗಿದೆ. ಈ ವೈವಿಧ್ಯತೆಯು ಎಷ್ಟು ವಿಶಾಲವಾಗಿದೆ ಎಂದರೆ ಇವುಗಳ ಮಧ್ಯೆ ಯಾವುದೇ ಸಾಮಾನ್ಯೀಕರಣವನ್ನು ಪಡೆಯಲು ಆಗದು. ಕೆಲವು ರಾಜ್ಯಗಳು ಶಿಕ್ಷಣದಲ್ಲಿ ಎಷ್ಟರ ಮಟ್ಟಿಗೆ ಪ್ರಗತಿ ಸಾಧಿಸಿವೆ ಎಂದರೆ ಅನಕ್ಷರತೆಯನ್ನು ಹೋಗಲಾಡಿಸಿ ಪ್ರಾಥಮಿಕ ಶಿಕ್ಷಣದಲ್ಲಿ ಮಕ್ಕಳ ಸರಿಸುಮಾರು ಸಾರ್ವತ್ರಿಕ ಪಾಲ್ಗೊಳ್ಳುವಿಕೆಯನ್ನು ಸಾಧಿಸಿವೆ. ಆದರೆ ಕೆಲವು ಇತರ ರಾಜ್ಯಗಳು ಅಂತಿಮ ಗುರಿಯಿಂದ ಸಾಕಷ್ಟು ದೂರವೇ ಉಳಿದಿವೆ. ದೇಶದ ಎಲ್ಲಾ ಭಾಗಗಳಲ್ಲಿ 2015ರ EFA ಗುರಿಯತ್ತ ಸಾಗುವುದಕ್ಕಾಗಿ ವೇಗದ ಪ್ರಗತಿಯನ್ನು ಸಾಧಿಸಲು ಯಾವುದರ ಅಗತ್ಯವಿದೆ? ಇದಕ್ಕಾಗಿ ಪ್ರತಿಯೊಂದು ಗುರಿ ಹಾಗೂ ರಾಜ್ಯವಾರು ಮಟ್ಟದಲ್ಲಿ ವಿಶ್ಲೇಷಣಾತ್ಮಕ ಪ್ರಕ್ರಿಯೆಯ ಅಗತ್ಯವಿದೆ.

ಈ ಉದ್ದೇಶದಿಂದ, ವಿವಿಧ EFA ಗುರಿಗಳಿಗೆ ಸಂಬಂಧಿಸಿದಂತೆ ವಿವಿಧ ರಾಜ್ಯಗಳಲ್ಲಿ ಸಾಧಿಸಲಾದ ಪ್ರಗತಿಯ ಸ್ವತಂತ್ರ ಮೌಲ್ಯಮಾಪನ ನಡೆಸುವುದಕ್ಕಾಗಿ ಪ್ರಸ್ತುತ ಪ್ರಕ್ರಿಯೆಯನ್ನು ಕೈಗೆತ್ತಿಕೊಳ್ಳಲಾಯಿತು. ಪ್ರಸ್ತುತ ಪ್ರಬಂಧಗಳ ಸರಣಿಯು, ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸಹಯೋಗದೊಂದಿಗೆ ಸ್ವತಂತ್ರ ತಜ್ಞರು ಕೈಗೊಂಡ ಇಂತಹ ಸಮಗ್ರ ಪ್ರಕ್ರಿಯೆಯ ಫಲಿತಾಂಶವಾಗಿದೆ. ಈ ಪ್ರಕ್ರಿಯೆಯ ಮೂಲ ಉದ್ದೇಶವು, EFA ಗುರಿಗಳತ್ತ ಮಾಡಲಾದ ಪ್ರಗತಿ ಮತ್ತು ವಾಸ್ತವಿಕ ರೀತಿಯಲ್ಲಿ ಗುರಿಗಳನ್ನು ಸಾಧಿಸುವುದಕ್ಕಾಗಿ ಇರುವ ಸವಾಲುಗಳ ವಿಶ್ಲೇಷಣಾತ್ಮಕ ಚಿತ್ರಣವನ್ನು ಇಡಿಯಾಗಿ ನೀತಿ ನಿರೂಪಕರು, ಯೋಜನೆ ರೂಪಿಸುವವರು ಮತ್ತು ನಾಗರಿಕ ಸಮಾಜದ ಎದುರು ಬಿಚ್ಚಿಡುವುದಾಗಿದೆ.

ಈ ಪ್ರಕ್ರಿಯೆಯು ಮೂರು ಭಾಗಗಳನ್ನು ಒಳಗೊಂಡಿತ್ತು. ಮೊದಲನೆಯ ಭಾಗವು, ಡಾಕರ್ ಘೋಷಣೆಯಲ್ಲಿ ಉಲ್ಲೇಖಿಸಲಾದ ಆರು ಗುರಿಗಳಿಗೆ ಸಂಬಂಧಿಸಿದಂತೆ ದೇಶದಲ್ಲಿ ಸಾಧಿಸಲಾಗಿರುವ ಒಟ್ಟಾರೆ ಪ್ರಗತಿಯನ್ನು ಪ್ರಸ್ತುತಪಡಿಸುವುದಾಗಿತ್ತು. ಇದು ಬಹು ಮುಖ್ಯವಾಗಿ UNESCO ಸಿದ್ಧಪಡಿಸಿದ ಮೌಲ್ಯಮಾಪನದ ತಾಂತ್ರಿಕ ಮಾರ್ಗದರ್ಶಿಗಳನ್ನು ಆಧರಿಸಿತ್ತು. “Education For All Mid-Decade Assessment:Reaching the Unreached (ಎಜುಕೇಶನ್ ಫಾರ್ ಆಲ್ ಮಿಡ್-ಡಿಕೇಡ್ ಅಸೆಸ್ಮೆಂಟ್: ರೀಚಿಂಗ್ ದ ಅನ್ ರೀಚ್ಡ್)” ಎನ್ನುವ ಶೀರ್ಷಿಕೆಯ ರಾಷ್ಟ್ರೀಯ ವರದಿಯನ್ನು, NUEPA ಮತ್ತು ಭಾರತ ಸರ್ಕಾರ ಜಂಟಿಯಾಗಿ ಸಿದ್ಧಪಡಿಸಿ ಪ್ರಕಟಿಸಿವೆ.

ಎರಡನೇ ಭಾಗವು, ಭಾರತೀಯ ಸನ್ನಿವೇಶ ಮತ್ತು ಆದ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ಸಿದ್ಧಪಡಿಸಿದ ‘ಎಲ್ಲರಿಗೂ ಶಿಕ್ಷಣ’ದ ವಿವಿಧ ಆಯಾಮಗಳ ಮೇಲೆ ಬೆಳಕು ಹರಿಸುವ ಒಂಬತ್ತು ವಿಷಯಾಧಾರಿತ ಪರಿಶೀಲನೆ ಪ್ರಬಂಧಗಳ ಸರಣಿಯನ್ನು ಒಳಗೊಂಡಿದೆ. ಅವುಗಳೆಂದರೆ: (i) ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣ; (ii) ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ; (iii) ವಯಸ್ಕ ಶಿಕ್ಷಣ; (iv) ಶಿಕ್ಷಣದಲ್ಲಿ ಲಿಂಗ ಸಮಾನತೆಯತ್ತ; (v) ತರುಣಾವಸ್ಥೆಯವರ ಮತ್ತು ಯುವ ವಯಸ್ಕರ ಶಿಕ್ಷಣ; (vi) ಶಿಕ್ಷಣ ಗುಣಮಟ್ಟ; (vii) ಶಿಕ್ಷಕರು ಮತ್ತು ಶಿಕ್ಷಕರ ಶಿಕ್ಷಣ; (viii) EFA ಗಾಗಿ ಆಡಳಿತ ಕಾರ್ಯತಂತ್ರಗಳು ಮತ್ತು (ix) EFA ಗೆ ಹಣಕಾಸು ಒದಗಿಸುವುದು. ಪ್ರತಿಯೊಂದು ಪ್ರಬಂಧವನ್ನು ಸಂಬಂಧಿತ ಕ್ಷೇತ್ರದಲ್ಲಿ ತಜ್ಞರಾಗಿರುವ ವ್ಯಕ್ತಿಯಿಂದ ಅಥವಾ ವ್ಯಕ್ತಿಗಳಿಂದ ಸಿದ್ಧಪಡಿಸಲಾಗಿದೆ. ಈ ಪ್ರಬಂಧಗಳು ಇನ್ನೊಬ್ಬ ಸ್ವತಂತ್ರ ತಜ್ಞರಿಂದ ಪರಿಶೀಲಿಸಲ್ಪಟ್ಟಿವೆ ಹಾಗೂ ಅವರ ಅವಲೋಕನಗಳನ್ನು ಆಧರಿಸಿ ಪರಿಷ್ಕರಿಸಲಾಗಿದೆ.

ಮೂರನೇ ಭಾಗವು ಭಾರತದ ಎಲ್ಲಾ ರಾಜ್ಯಗಳನ್ನು ಒಳಗೊಳ್ಳುವ ವಿಶ್ಲೇಷಣಾತ್ಮಕ ಪ್ರಬಂಧಗಳನ್ನು ಒಳಗೊಂಡಿದೆ. ಪ್ರತಿ ವಿಷಯಾಧಾರಿತ ಪರಿಶೀಲನೆ ಮತ್ತು ನಿರ್ದಿಷ್ಟ ರಾಜ್ಯ ಸಂಬಂಧಿತ ವಿಶ್ಲೇಷಣಾತ್ಮಕ ಪರಿಶೀಲನೆಯನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಒಟ್ಟುಗೂಡಿದ ಸಹಯೋಗದೊಂದಿಗೆ ಸಂಬಂಧಿತ ಕ್ಷೇತ್ರ/ ರಾಜ್ಯದಲ್ಲಿ ತನ್ನ ಪರಿಣತಿಯನ್ನು ಸಾಬೀತುಪಡಿಸಿರುವ ವ್ಯಕ್ತಿಗಳು ಸಿದ್ಧಪಡಿಸಿದ್ದಾರೆ. ರಾಜ್ಯ ಮಟ್ಟದ ಪರಿಶೀಲನೆಗಳನ್ನು, ರಾಷ್ಟ್ರೀಯ ಪರಿಶೀಲನೆಯನ್ನು ಸಿದ್ಧಪಡಿಸಿದ ರೀತಿಯಲ್ಲೇ ಸಿದ್ಧಪಡಿಸಲಾಗಿದೆ. ಅವುಗಳಲ್ಲಿ ಪ್ರತಿಯೊಂದು ಸಹ ಡಾಕರ್ ಘೋಷಣೆಯಲ್ಲಿ ಸ್ಪಷ್ಟಪಡಿಸಿದ ಆರು EFA ಗುರಿಗಳ ಮೇಲೆ ಸಮಗ್ರವಾಗಿ ಬೆಳಕು ಚೆಲ್ಲುತ್ತದೆ.

ವೆನಿತಾ ಕೌಲ್ ಮತ್ತು ದೀಪಾ ಶಂಕರ್ ಅವರ ಪ್ರಸ್ತುತ ಪ್ರಬಂಧವು, ಶಾಲಾ ಆಧಾರಿತ ಪೂರ್ವ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮಗಳು ಮತ್ತು ಹೆಚ್ಚು ವ್ಯಾಪಕವೆನಿಸಿರುವ ICDS ಕಾರ್ಯಕ್ರಮದ ಮೇಲೆ ಸಮಗ್ರವಾಗಿ ಬೆಳಕು ಹರಿಸುತ್ತಾ *'ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣ'* ಕ್ಕೆ ಸಂಬಂಧಿಸಿದಂತೆ ಇರುವ ಸನ್ನಿವೇಶವನ್ನು ಪರಿಶೀಲಿಸುತ್ತದೆ. ಶಾಲೆಗೆ ಹೋಗಲು ಮಕ್ಕಳ ಪೂರ್ವಸಿದ್ಧತೆ ಮಾತ್ರವಲ್ಲದೆ ತಮ್ಮ ಮೂಲಭೂತ ಬೆಳವಣಿಗೆ ಮತ್ತು ಅಭಿವೃದ್ಧಿಯ ಅಗತ್ಯತೆಗಳನ್ನು ಪೂರೈಸುವುದಕ್ಕಾಗಿ ಶಾಲಾ ಪೂರ್ವದ ಅನುಭವವನ್ನು ಒದಗಿಸುವುದರಲ್ಲಿನ ಮೌಲ್ಯದತ್ತ ಹೆಚ್ಚಿನ ಪ್ರಾಯೋಗಿಕ ಸಾಕ್ಷ್ಯವು ಬೆರಳು ತೋರಿಸುವುದರಿಂದ ಇದು ನಿಜಕ್ಕೂ ಪ್ರಮುಖ ನಿರ್ಣಾಯಕ ಕ್ಷೇತ್ರವಾಗಿದೆ. ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣವನ್ನು ಒದಗಿಸುವುದು ಡಾಕರ್ ಕ್ರಿಯಾ ಚೌಕಟ್ಟಿನಲ್ಲಿ ಹೇಳಲಾಗಿರುವ ಮೊದಲ ಗುರಿಯಾಗಿದ್ದು, ರಾಷ್ಟ್ರೀಯ ಕ್ರಿಯಾ ಯೋಜನೆಯು ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣದ ಸಮಗ್ರ ದೃಷ್ಟಿಕೋನವನ್ನು ಪರಿಗಣಿಸುವ ಭರವಸೆಯನ್ನು ನೀಡುತ್ತದೆ.

EFA ಕುರಿತು UNESCO ಸಂಸ್ಥೆಯು ಹೊರತಂದಿರುವ 'Global Monitoring Report' ನಲ್ಲಿ, ಅನೇಕ EFA ಗುರಿಗಳಿಗೆ ಸಂಬಂಧಿಸಿದಂತೆ ಜಾಗತಿಕ ಲಕ್ಷ್ಯಗಳನ್ನು ಈಡೇರಿಸದೆ ಇರುವ ಅಪಾಯವನ್ನು ಭಾರತವು ಹೊಂದಿದೆ ಎಂದು ಪುನರಾವರ್ತಿತವಾಗಿ ಹೇಳಿರುವ ಹಿನ್ನೆಲೆಯಲ್ಲಿ EFA ಯಲ್ಲಿ ಸಾಧಿಸಲಾಗಿರುವ ಪ್ರಗತಿಯ ಮೌಲ್ಯಮಾಪನದ ಈ ವಿಸ್ತೃತ ಪ್ರಕ್ರಿಯೆಯನ್ನು ಪರಿಗಣಿಸಬೇಕು. ದೇಶದಾದ್ಯಂತ ಇರುವ ಪರಿಸ್ಥಿತಿಯು ಸಾಕಷ್ಟು ವೈವಿಧ್ಯತೆಯನ್ನು ಹೊಂದಿದೆ ಎಂದು ಈ ಪರಿಶೀಲನೆಯ ಫಲಿತಾಂಶಗಳು ಸ್ಪಷ್ಟಪಡಿಸುತ್ತವೆ. ಕೆಲವು ರಾಜ್ಯಗಳು ಎಲ್ಲಾ ವಿಷಯಗಳಲ್ಲಿ ವೇಗದ ಪ್ರಗತಿಯನ್ನು ದಾಖಲಿಸಿದ್ದರೂ, ಉಳಿದ ಕೆಲವು ರಾಜ್ಯಗಳು ಹಿಂದೆ ಬಿದ್ದಿವೆ. EFA

ಯ ಇತರ ಗುರಿಗಳಿಗೆ ಸಂಬಂಧಿಸಿದಂತೆ ಇನ್ನಷ್ಟು ಸಾಧಿಸಬೇಕಾದ ಅಗತ್ಯತೆ ಇದ್ದರೂ, ಒಟ್ಟಾರೆಯಾಗಿ ಎಲ್ಲಾ ಕಡೆಗಳಲ್ಲಿ ಕಲಿಕೆಯ ಅವಕಾಶದಲ್ಲಿ ಸುಧಾರಣೆ ಆಗಿದೆ. ಈ ಪ್ರಕ್ರಿಯೆಯ ಮೂಲಕ ಹೊರತಂದ ವಿವಿಧ ಸಂಪುಟಗಳು ಒಟ್ಟಿಗೆ ಎಲ್ಲರಿಗೂ ಶಿಕ್ಷಣ ಮತ್ತು ದೇಶದ ಸಾಧನೆಗಳ ನೈಜ ವಿಶ್ಲೇಷಣೆ ಮತ್ತು ಪ್ರತ್ಯೇಕವಾಗಿ ವಿಂಗಡಿಸಿದ ಚಿತ್ರಣವನ್ನು ನೀಡುವಲ್ಲಿ ಯಶಸ್ವಿಯಾಗುತ್ತದೆ ಎಂಬ ಭರವಸೆ ಹೊಂದಿದೆ.

# ಕೃತಜ್ಞತೆಗಳು

EFA ಯ ಪ್ರಗತಿಯನ್ನು ಪರಿಶೀಲಿಸುವ ಈ ಸಮಗ್ರ ಪ್ರಕ್ರಿಯೆಯನ್ನು ತಜ್ಞರ ದೊಡ್ಡ ತಂಡ ಹಾಗೂ ಭಾರತ ಸರ್ಕಾರ ಮತ್ತು ವಿವಿಧ ರಾಜ್ಯ ಸರ್ಕಾರಗಳ ಅಧಿಕಾರಿಗಳ ಸಕ್ರಿಯ ಪಾಲ್ಗೊಳ್ಳುವಿಕೆ ಮತ್ತು ನೆರವಿನ ಮೂಲಕ ಪೂರ್ಣಗೊಳಿಸಲಾಗಿದೆ. ಈ ಪ್ರಕ್ರಿಯೆಯನ್ನು, ಪ್ರೊಫೆಸರ್ ಎ.ಕೆ ಶರ್ಮ ಅವರ ನಾಯಕತ್ವದ ತಾಂತ್ರಿಕ ಸಲಹಾ ಗುಂಪಿನ ಸದಸ್ಯರ ನಿರಂತರ ಮಾರ್ಗದರ್ಶನದಡಿ ನಡೆಸಲಾಗಿದೆ. ಈ ಕೆಲಸವನ್ನು ಪ್ರೊಫೆಸರ್ ವೇದ ಪ್ರಕಾಶ್, ಉಪಕುಲಪತಿ, NUEPA, ಅವರ ಬದ್ಧತೆ ಮತ್ತು ನೆರವು ಇಲ್ಲದೆ ಇದ್ದರೆ ಪೂರ್ಣಗೊಳಿಸಲು ಅಸಾಧ್ಯವಾಗುತ್ತಿತ್ತು. ಇಡೀ ಪ್ರಕ್ರಿಯೆಯನ್ನು ರೂಪಿಸಿ ಕಾರ್ಯಗತಗೊಳಿಸುವುದರಲ್ಲಿ ಕೇಂದ್ರ ಪಾತ್ರ ವಹಿಸಿದ ಶ್ರೀಮತಿ ಅನಿತಾ ಕೌಲ್, ಜಂಟಿ ಕಾರ್ಯದರ್ಶಿ, MHRD, ಭಾರತ ಸರ್ಕಾರ, ಇವರಿಗೆ ವಿಶೇಷ ಧನ್ಯವಾದಗಳು. ಈ ಪ್ರಕ್ರಿಯೆಗೆ UNICEF ಮತ್ತು UNESCO ಕಡೆಯಿಂದ ಹಣಕಾಸಿನ ನೆರವು ದೊರೆತಿದೆ. ಮುಖ್ಯವಾಗಿ, ಈ ಯೋಜನೆಯನ್ನು ಸುಗಮವಾಗಿ ಪೂರ್ಣಗೊಳಿಸುವುದಕ್ಕಾಗಿ ವೈಯಕ್ತಿಕವಾಗಿ ವಿಶೇಷ ಆಸಕ್ತಿ ವಹಿಸಿದ ಶ್ರೀ ಸಾಂಘೆ ಲಾಂಗ್ಪಾ ಅವರಿಗೆ ಧನ್ಯವಾದಗಳು. ಸಂಪುಟಗಳನ್ನು ಮುದ್ರಿಸಿ ಪ್ರಕಟಿಸಲು ತಾಂತ್ರಿಕ ನೆರವು ಮತ್ತು ಸಹಕಾರ ನೀಡಿದ NUEPA ಪ್ರಕಟಣಾ ಘಟಕಕ್ಕೆ ನಮ್ಮ ಕೃತಜ್ಞತೆ ವ್ಯಕ್ತಪಡಿಸಲು ಬಯಸುತ್ತೇವೆ.

**EFA ಯೋಜನಾ ತಂಡ**

**ರಾಷ್ಟ್ರೀಯ ಶೈಕ್ಷಣಿಕ ಯೋಜನೆ ಮತ್ತು ಆಡಳಿತ ವಿಶ್ವವಿದ್ಯಾಲಯ**

## ತಾಂತ್ರಿಕ ಸಲಹಾ ಗುಂಪು

| | |
|---|---|
| ಪ್ರೊಫೆಸರ್ ಎ.ಕೆ ಶರ್ಮ<br>ಮಾಜಿ ನಿರ್ದೇಶಕರು<br>NCERT | ಅಧ್ಯಕ್ಷರು |
| ಪ್ರೊಫೆಸರ್ ವೇದ ಪ್ರಕಾಶ್<br>ಉಪಕುಲಪತಿ<br>NUEPA | ಸದಸ್ಯರು |
| ಜಂಟಿ ಕಾರ್ಯದರ್ಶಿ (EE)<br>MHRD | ಸದಸ್ಯರು |
| ಪ್ರೊಫೆಸರ್ ಆರ್ ಗೋವಿಂದ<br>ಮುಖ್ಯಸ್ಥರು<br>S&NFE ವಿಭಾಗ<br>NUEPA | ಸದಸ್ಯರು |
| ಉಪ ಕಾರ್ಯದರ್ಶಿ<br>MHRD | ಸಂಯೋಜಕರು |

### NUEPA ಯೋಜನಾ ತಂಡ

| | |
|---|---|
| ಪ್ರೊಫೆಸರ್ ಆರ್ ಗೋವಿಂದ<br>ಮುಖ್ಯಸ್ಥರು<br>S&NFE ವಿಭಾಗ<br>NUEPA | ಯೋಜನಾ ನಿರ್ದೇಶಕರು |
| ಡಾ. ಮೋನಾ ಸೆಡ್ವಾಲ್<br>NUEPA | ಪ್ರಾಜೆಕ್ಟ್ ಅಸೋಸಿಯೇಟ್ ಫೆಲೋ |

## ಲೇಖಕರ ಕುರಿತು

ವೆನಿತಾ ಕೌಲ್ ಅವರು ವಿಶ್ವಬ್ಯಾಂಕ್ ನಲ್ಲಿ ಹಿರಿಯ ಶೈಕ್ಷಣಿಕ ವಿಶೇಷಜ್ಞರಾಗಿದ್ದಾರೆ. ಇಲ್ಲಿ ಸೇರುವ ಮೊದಲು ಅವರು NCERT ಯಲ್ಲಿ ಶಾಲಾಪೂರ್ವ ಮತ್ತು ಪ್ರಾಥಮಿಕ ಶಿಕ್ಷಣ ವಿಭಾಗದ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರಾಗಿದ್ದರು. ಅವರು ಭಾರತೀಯ ಸನ್ನಿವೇಶದಲ್ಲಿ ಆರಂಭಿಕ ಬಾಲ್ಯದ ಶಿಕ್ಷಣ ಮತ್ತು ಆರಂಭಿಕ ಪ್ರಾಥಮಿಕ ಶಿಕ್ಷಣದ ಕ್ಷೇತ್ರಗಳಲ್ಲಿ ಸಾಕಷ್ಟು ಲೇಖನಗಳು ಮಾತ್ರವಲ್ಲದೆ ಅನೇಕ ಪುಸ್ತಕಗಳು ಮತ್ತು ಪ್ರಬಂಧಗಳನ್ನು ಸಹ ಬರೆದಿದ್ದಾರೆ.

ದೀಪಾ ಶಂಕರ್ ಅವರು ವಿಶ್ವ ಬ್ಯಾಂಕ್ ನ ದಕ್ಷಿಣ ಏಷ್ಯಾ ಮಾನವ ಅಭಿವೃದ್ಧಿ ವಿಭಾಗದಲ್ಲಿ ಶಿಕ್ಷಣ ಅರ್ಥಶಾಸ್ತ್ರಜ್ಞರಾಗಿದ್ದಾರೆ.

# ಪರಿವಿಡಿ

**ವಿಭಾಗ – I**

# ಪರಿಚಯ

ಮಗುವಿನ ಮೊದಲ ಆರರಿಂದ ಎಂಟು ವರ್ಷಗಳ ಅನುಭವಗಳು ಜೀವನ ಪರ್ಯಂತ ಉಳಿದುಕೊಳ್ಳುತ್ತವೆ. ಆರಂಭಿಕ ಬಾಲ್ಯದ ಹಂತ ಎಂದು ಕರೆಸಿಕೊಳ್ಳುವ ಈ ವರ್ಷಗಳನ್ನು ಜೀವನ ಪರ್ಯಂತ ಬೆಳವಣಿಗೆಗಾಗಿ ಅತ್ಯಂತ ನಿರ್ಣಾಯಕ ವರ್ಷಗಳು ಎಂದು ಜಾಗತಿಕವಾಗಿ ಪರಿಗಣಿಸಲಾಗಿದೆ. ಏಕೆಂದರೆ ಈ ವರ್ಷಗಳಲ್ಲಿ ಬೆಳವಣಿಗೆಯ ವೇಗವು ಅತ್ಯಂತ ಕ್ಷಿಪ್ರವಾಗಿರುತ್ತದೆ. ನರವಿಜ್ಞಾನದ ಕ್ಷೇತ್ರದಲ್ಲಿ ನಡೆದಿರುವ ಇತ್ತೀಚಿನ ಸಂಶೋಧನೆಯು, “ಆರಂಭಿಕ ವರ್ಷಗಳಲ್ಲಿ ಉಂಟಾಗುವ ಅನುಭವ ಆಧಾರಿತ ಮೆದುಳಿನ ಬೆಳವಣಿಗೆಯು ಬದುಕಿನಾದ್ಯಂತ ಆರೋಗ್ಯ, ಕಲಿಕೆ ಮತ್ತು ವರ್ತನೆಯ ಮೇಲೆ ಪ್ರಭಾವ ಬೀರುವ ನರಶಾಸ್ತ್ರೀಯ ಮತ್ತು ಜೀವಶಾಸ್ತ್ರೀಯ ರಹದಾರಿಯನ್ನು ರೂಪಿಸುತ್ತದೆ’’ ಎಂಬುದಕ್ಕೆ ಬಲವಾದ ಸಾಕ್ಷ್ಯವನ್ನು ಒದಗಿಸಿದೆ (Mustard (ಮಸ್ಟರ್ಡ್), 2007:40). ಬದುಕಿನ ಈ ಆರಂಭಿಕ ವರ್ಷಗಳಲ್ಲಿ, ಬದುಕಿನಲ್ಲಿ ನಂತರದ ಯಶಸ್ಸಿಗೆ ಗಣನೀಯ ಕಾರಣವೆನಿಸುವ ಅನೇಕ ಸಂಜ್ಞಾನಾತ್ಮಕ, ಸಾಮಾಜಿಕ ಮತ್ತು ಮನೋಚಲನ ಸಾಮರ್ಥ್ಯಗಳಿಗಾಗಿ ನಿರ್ಣಾಯಕ ಅವಧಿಗಳನ್ನು ಗುರುತಿಸಲಾಗಿದೆ. ಈ ನಿರ್ಣಾಯಕ ಅವಧಿಗಳನ್ನು ಬೆಂಬಲಿಸದೆ ಇದ್ದರೆ ಅಥವಾ ಪ್ರಚೋದಿಸುವ ಮತ್ತು ಸಮೃದ್ಧಗೊಳಿಸುವ ದೈಹಿಕ ಮತ್ತು ಮಾನಸಿಕ-ಸಾಮಾಜಿಕ ಪರಿಸರದಲ್ಲಿ ನೆಲೆಗೊಳ್ಳದೆ ಇದ್ದರೆ, ಮಗುವಿನ ಮೆದುಳು ತನ್ನ ಸಂಪೂರ್ಣ ಸಾಮರ್ಥ್ಯವನ್ನು ಬೆಳೆಸಿಕೊಳ್ಳುವ ಸಾಧ್ಯತೆಗಳು ಗಣನೀಯವಾಗಿ, ಕೆಲವೊಮ್ಮೆ ಬದಲಾಯಿಸಲಾಗದಂತೆ, ಕುಗ್ಗುತ್ತವೆ. ಈ ಸಂಶೋಧನೆಯ ಫಲಿತಾಂಶವು, ಮುಖ್ಯವಾಗಿ ಅಭಿವೃದ್ಧಿ ಹೊಂದುತ್ತಿರುವ ಪ್ರಪಂಚದಲ್ಲಿ, ಬಡತನದ ಹಿನ್ನೆಲೆಯನ್ನು ಹೊಂದಿರುವ ದೊಡ್ಡ ಪ್ರಮಾಣದ ಮಕ್ಕಳನ್ನು ಅವರ ಬದುಕಿನ ಅವಕಾಶಗಳಿಗೆ ಸಂಬಂಧಿಸಿದಂತೆ ‘ಅಪಾಯದಲ್ಲಿ’ರಿಸುತ್ತದೆ. “ಅನೇಕ ದೇಶಗಳ ಅತ್ಯಂತ ಬಡ ಮಕ್ಕಳು ಶಾಲಾ ವಯಸ್ಸನ್ನು ತಲುಪುವಾಗ ಸಂಜ್ಞಾನಾತ್ಮಕ ಮತ್ತು ಸಾಮಾಜಿಕ ಸಾಮರ್ಥ್ಯದಲ್ಲಿ ಗಣನೀಯ ಪ್ರಮಾಣದಲ್ಲಿ ಅನನುಕೂಲತೆಗೆ ಈಡಾಗಿರುತ್ತಾರೆ” (World Bank (ವಿಶ್ವ ಬ್ಯಾಂಕ್), 2005b:132). ಈ ಆರಂಭಿಕ ಬಾಲ್ಯದ ಹಂತವು, ಜೀವನ ಪರ್ಯಂತ ಉಳಿದುಕೊಳ್ಳುವ ಸಾಮಾಜಿಕ ಮತ್ತು ವೈಯಕ್ತಿಕ ಅಭ್ಯಾಸಗಳನ್ನು ರೂಢಿಸಿಕೊಳ್ಳಲು ತಳಪಾಯವಾಗಿಯೂ ಪ್ರಮುಖವೆನಿಸುತ್ತದೆ. ತಾರ್ಕಿಕವಾಗಿ, ಪ್ರತಿ ಮಗುವಿಗೂ ಅನುವುಗೊಳಿಸುವ ಪರಿಸರವನ್ನು ಖಾತರಿಪಡಿಸಲು ಮತ್ತು ಈ ಮೂಲಕ ಬದುಕಿಗೆ ಸದೃಢ ತಳಪಾಯವನ್ನು ಒದಗಿಸಲು ಈ ವರ್ಷಗಳು ಹೂಡಿಕೆಯ ದೃಷ್ಟಿಯಿಂದ ನಿರ್ಣಾಯಕವೂ ಮುಖ್ಯವೂ ಎನಿಸುತ್ತದೆ. ಇದು, ಪ್ರತಿ ಮಗುವಿನ ಹಕ್ಕು ಮಾತ್ರವಲ್ಲದೆ, ಮುಂದಿನ ವರ್ಷಗಳಲ್ಲಿ ‘ಯುವ ಶಕ್ತಿ’ಯೇ ತಮ್ಮ ಪ್ರಮುಖ ಆಸ್ತಿಯೆನಿಸುವ ಭಾರತದಂತಹ ದೇಶದಲ್ಲಿ ಲಭ್ಯವಿರುವ ಮಾನವ ಬಂಡವಾಳದ ಗುಣಮಟ್ಟದ ಮೇಲೆ ದೀರ್ಘ ಕಾಲದಲ್ಲಿ ಪ್ರಭಾವವನ್ನೂ ಬೀರುತ್ತದೆ.

**ವಿಭಾಗ – II**

# ಆರಂಭಿಕ ಬಾಲ್ಯದ ಅಭಿವೃದ್ಧಿ ((ECD)- ಭಾರತೀಯ ಸನ್ನಿವೇಶ

## ನಮ್ಮ ಸಾಂಸ್ಕೃತಿಕ ಪರಂಪರೆ

ಪ್ರಸವಪೂರ್ವದಿಂದ 6 ವರ್ಷಗಳ ವರೆಗಿನ ವಯೋಮಾನದ ಮಕ್ಕಳಿಗೆ ಇರುವ ಆರಂಭಿಕ ಬಾಲ್ಯದ ಅಭಿವೃದ್ಧಿ (Early Childhood Development (ECD)) ಕಾರ್ಯಕ್ರಮಗಳು, ಈ ಆಧಾರದ ಮೇಲೆ ಮತ್ತು ಮಗುವಿಗೆ ಅತ್ಯುತ್ತಮ ಅಗತ್ಯ ಆರೈಕೆಯನ್ನು ಖಾತರಿಪಡಿಸಲು ಅನೇಕವೇಳೆ ಕುಟುಂಬಗಳ ಪರಿಸ್ಥಿತಿಯನ್ನು ಕೊರೆ ಉಳ್ಳದವುಗಳನ್ನಾಗಿ ಮಾಡಿದ ಕಳೆದ ಕೆಲವು ದಶಕಗಳಲ್ಲಿ ಬದಲಾಗುತ್ತಿರುವ ಸಾಮಾಜಿಕ, ಆರ್ಥಿಕ ಮತ್ತು ಜನಸಂಖ್ಯಾಶಾಸ್ತ್ರೀಯ ಸಂದರ್ಭಗಳಿಂದ ತಮ್ಮ ಪ್ರಾಮುಖ್ಯತೆಯನ್ನು ಪಡೆಯುತ್ತವೆ. ಭಾರತದ ಹಿಂದಿನ ಸಾಂಸ್ಕೃತಿಕ ಪರಂಪರೆಯನ್ನು ನೋಡಿದಾಗ, ಸಾಂಪ್ರದಾಯಿಕವಾಗಿ ಆರಂಭಿಕ ಬಾಲ್ಯದ ವರ್ಷಗಳು (ಪ್ರಸವಪೂರ್ವದಿಂದ ಐದು ವರ್ಷಗಳ ತನಕ) ಮಕ್ಕಳಲ್ಲಿ ಮೂಲಭೂತ ಮೌಲ್ಯಗಳು ಮತ್ತು ಸಾಮಾಜಿಕ ಕೌಶಲ್ಯಗಳಿಗೆ ತಳಪಾಯ ಒದಗಿಸುತ್ತವೆ ಎಂದು ಪರಿಗಣಿಸಲಾಗುತ್ತಿತ್ತು ಎಂದು ಸೂಚಿಸುತ್ತವೆ. ಈ ಮೌಲ್ಯಗಳನ್ನು ಕುಟುಂಬದಿಂದ *'ಸಂಸ್ಕಾರ'*ದ ರೂಪದಲ್ಲಿ ಪಡೆಯಲಾಗುತ್ತದೆ ಹಾಗೂ ಹಿರಿಯ ಮಗುವಿಗೆ ಬಳಸುವ ಅತ್ಯಂತ ಶಿಸ್ತಿನ ವಿಧಾನಕ್ಕೆ ಹೋಲಿಸಿದರೆ, ಈ ಹಂತದಲ್ಲಿ ಮಗುವನ್ನು ಬೆಳೆಸುವ ಅಪೇಕ್ಷಣೀಯ ವಿಧಾನವಾಗಿ *'ಲಾಲಯತ್ (lalayat)'* ಅಥವಾ ಇಚ್ಛೆಯನ್ನು ಪೂರೈಸುವ ಮನೋಭಾವವನ್ನು ಹೊಂದಲು ಪುರಾಣಗಳು ಪ್ರತಿಪಾದಿಸುತ್ತವೆ! ಮಗುವಿನ ಹೆಚ್ಚಿನ ಆರಂಭಿಕ ಆರೈಕೆ ಮತ್ತು ಶಿಕ್ಷಣವು ಕುಟುಂಬದೊಳಗೆ ಮತ್ತು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಹಸ್ತಾಂತರಿಸಿದ, ಅಜ್ಜಿಯಂದಿರ ಆರೈಕೆಯ ವಿಧಾನಗಳು, ಕಥೆಗಳು, ಲಾಲಿ ಹಾಡುಗಳು ಮತ್ತು ಶಿಶುಗಳ ಸಾಂಪ್ರದಾಯಿಕ ಆಟಗಳ ಮೂಲಕ ಅನೌಪಚಾರಿಕವಾಗಿ ನಡೆಯುತ್ತಿತ್ತು. ಅಭಿವೃದ್ಧಿಯ ದೃಷ್ಟಿಯಿಂದ ಸೂಕ್ತವೆನಿಸುವ ಮಗುವಿನ ಆರೈಕೆಯ ಈ ಸಂಪತ್ತು, ಮಗುವಿಗೆ ಒದಗಿಸಿದ ಸ್ವಾರಸ್ಯವಿಲ್ಲದ ಹೆಚ್ಚು ಆಧುನಿಕ ಸೌಲಭ್ಯಗಳು ಹಾಗೂ ಬದಲಾಗುತ್ತಿರುವ ಸಾಮಾಜಿಕ ನೈಜತೆಗಳ ನಡುವೆ ಕ್ರಮೇಣ ನಶಿಸಿ ಹೋಗುತ್ತಿವೆ.

ಭಾರತದಲ್ಲಿ, ಎಲ್ಲಾ ಕಡೆ ಇದ್ದಂತೆಯೇ, ಈ ಬದಲಾವಣೆಗಳು ಮುಖ್ಯವಾಗಿ ಅವಿಭಕ್ತದಿಂದ ವಿಭಕ್ತ - ಹೀಗೆ ಬದಲಾಗುತ್ತಿರುವ ಕೌಟುಂಬಿಕ ರಚನೆಯೊಂದಿಗೆ ಹೆಚ್ಚು ನಿರ್ದಿಷ್ಟವಾಗಿ ಗುರುತಿಸಿಕೊಂಡಿವೆ. ಕುಟುಂಬದ ಹಂಚಿಕೊಂಡಿರುವ ಜವಾಬ್ದಾರಿ ಎನಿಸಿಕೊಳ್ಳುತ್ತಿದ್ದ ಪೋಷಕತ್ವವು ಇಂದು ಸಂಪೂರ್ಣವಾಗಿ ಪೋಷಕರ ಜವಾಬ್ದಾರಿಯಾಗಿದೆ; ಅನೇಕವೇಳೆ ಈ ಜವಾಬ್ದಾರಿಯನ್ನು ಮತ್ತೆ ಇನ್ನೊಬ್ಬರಿಗೆ ಹಸ್ತಾಂತರಿಸಲಾಗುತ್ತದೆ. ಉನ್ನತ ಸಾಮಾಜಿಕ - ಆರ್ಥಿಕ ಹಿನ್ನೆಲೆಯ ಮಕ್ಕಳಿಗೆ ಸಂಬಳಕ್ಕೆ ದುಡಿಯುವ ಬದಲಿ ಆರೈಕೆದಾರರು ಇದ್ದರೆ, ಕೆಳಮಟ್ಟದ ಸಾಮಾಜಿಕ - ಆರ್ಥಿಕ ಸಮುದಾಯಗಳಲ್ಲಿ ಮಗುವಿನ ಆರೈಕೆಯ ಜವಾಬ್ದಾರಿಯು ಹಿರಿಯ ಸಹೋದರಿಯರ ಹೆಗಲಿಗೆ ಬರುತ್ತದೆ. ಹೀಗಾಗಿ ಈ ಸಹೋದರಿಯರು ಅನೇಕವೇಳೆ ಶಾಲೆಯಿಂದ

ಹೊರಗುಳಿಯುತ್ತಾರೆ ಮತ್ತು ಅವರ ಬಾಲ್ಯ ಮತ್ತು ಮೂಲಭೂತ ಶಿಕ್ಷಣದಿಂದ ವಂಚಿತರಾಗುತ್ತಾರೆ. ಅಲ್ಲದೆ, ಬೆಳೆಯುತ್ತಿರುವ ನಗರೀಕರಣ ಮತ್ತು ತಾಯಂದಿರು ಮನೆಯ ಹೊರಗೆ ಉದ್ಯೋಗ ಅರಸುವುದರಲ್ಲಿ ಉಂಟಾಗುತ್ತಿರುವ ಹೆಚ್ಚಳದ ಕಾರಣ ಮನೆಯೊಳಗೆ ಎಳೆಯ ಮಕ್ಕಳಿಗೆ ಸಿಗಬೇಕಾದ "ಗುಣಮಟ್ಟದ ಅನೌಪಚಾರಿಕ ಆರಂಭಿಕ ಆರೈಕೆ ಮತ್ತು ಶಿಕ್ಷಣ"ವನ್ನು ಖಾತರಿಗೊಳಿಸುವ ಸಾಧ್ಯತೆಗಳನ್ನು ಇನ್ನಷ್ಟು ಪ್ರಭಾವಿಸಿದೆ. ಕಳೆದ ಕೆಲವು ವರ್ಷಗಳಲ್ಲಿ ಬದಲಾಗುತ್ತಿರುವ ಈ ಸಾಮಾಜಿಕ ಹಿನ್ನೆಲೆಯೇ, ಸಂಘಟಿತ ಶಾಲಾಪೂರ್ವದ ಶಿಕ್ಷಣ/ ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣ (Early Childhood Care and Education (ECCE)) ದ ಪರಿಕಲ್ಪನೆಯನ್ನು ಭಾರತದಲ್ಲಿ ಜಾರಿಗೊಳಿಸಲು ಅಡಿಪಾಯವಾಗಿತ್ತು.

## ECCE – ಪ್ರಾರಂಭ

ಭಾರತದಲ್ಲಿ ಸಂಘಟಿತ ಉಪಕ್ರಮವಾಗಿ ಶಾಲಾಪೂರ್ವದ/ ಆರಂಭಿಕ ಬಾಲ್ಯದ ಶಿಕ್ಷಣದ ಅತ್ಯಂತ ಮೊದಲ ಔಪಚಾರಿಕ ದಾಖಲೀಕರಣವು ಹತ್ತೊಂಬತ್ತನೇ ಶತಮಾನದ ಪೂರ್ವಾರ್ಧದಲ್ಲಿ ಪ್ರಾರಂಭವಾಗುತ್ತದೆ. ಗಿಜುಭಾಯಿ ಬಧೇಕಾ ಮತ್ತು ತಾರಾಬಾಯಿ ಮೋದಕ್ ಅವರು ಇತರರೊಂದಿಗೆ ಭಾರತದಲ್ಲಿ ಈ ಆಂದೋಲನದ ಆದ್ಯ ಪ್ರವರ್ತಕರೆನಿಸಿದರು. ಮೇಡಂ ಮಾಂಟೆಸ್ಸೊರಿಯ ಭಾರತ ಪ್ರವಾಸದಿಂದ ಪ್ರಭಾವಕ್ಕೆ ಒಳಗಾಗಿ ಅವರು ಗುಜರಾತಿನಲ್ಲಿ ಶಾಲಾಪೂರ್ವದ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಿದರು. ಮೇಡಂ ಮಾಂಟೆಸ್ಸೊರಿ ಅವರು 1946ರಲ್ಲಿ ಮಹಾತ್ಮ ಗಾಂಧಿಯನ್ನು ಭೇಟಿಯಾದರು. ದೊಡ್ಡ ಪ್ರಮಾಣದಲ್ಲಿ ಬಹುಪಾಲು ಮಕ್ಕಳಿಗೆ ಶಾಲಾಪೂರ್ವದ ಶಿಕ್ಷಣವು ದೊರೆಯುವಂತಾಗಲು ಆಕೆಯ ವಿಧಾನವನ್ನು 'ಭಾರತೀಕರಣ'ಗೊಳಿಸಲು ಗಾಂಧಿ ಅವರಿಗೆ ಕರೆ ನೀಡಿದರು. ಅದು ಬಹುಪಾಲು ಸ್ವಯಂಪ್ರೇರಿತ ಯತ್ನದ ಮೂಲಕ ಭಾರತದ ಗ್ರಾಮೀಣ ಭಾಗಗಳಲ್ಲಿ 'ಪೂರ್ವ ಮೂಲಭೂತ ಶಿಕ್ಷಣದ' ಆರಂಭವೆನಿಸಿತು. ಭಾರತಕ್ಕೆ 1947ರಲ್ಲಿ ಸ್ವಾತಂತ್ರ್ಯ ದೊರಕುವ ತನಕ, ಸ್ವಯಂಸೇವಾ ಮತ್ತು ಖಾಸಗಿ ಸಂಸ್ಥೆಗಳು, ಮುಖ್ಯವಾಗಿ ಶಾಲಾಪೂರ್ವ ಶಿಕ್ಷಣದ ರೂಪದಲ್ಲಿ ECCE ಯ ಅಗತ್ಯತೆಯನ್ನು ಮೂಲಭೂತವಾಗಿ ಪೂರ್ಣಗೊಳಿಸಿದವು. ಈ ಕ್ಷೇತ್ರದಲ್ಲಿ ಮೊದಲ ಸರ್ಕಾರಿ ಉಪಕ್ರಮವು 1953ರಲ್ಲಿ ಕೇಂದ್ರ ಸಾಮಾಜಿಕ ಕಲ್ಯಾಣ ಮಂಡಳಿಯ ಸ್ಥಾಪನೆಯ ಮೂಲಕ ಪ್ರಾರಂಭವಾಯಿತು. ಈ ಮಂಡಳಿಯು ಸ್ವಯಂಸೇವಾ ಸಂಸ್ಥೆಗಳಿಗೆ ಅನುದಾನದ ಯೋಜನೆಯನ್ನು ಪ್ರಾರಂಭಿಸಿತು. ಆದಾಗ್ಯೂ, ಈ ಅರ್ಧ ಶತಮಾನದ ಕಾಲದಲ್ಲಿ ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣದ (ಆರೋಗ್ಯ, ಪೌಷ್ಠಿಕಾಂಶ ಮತ್ತು ಶಿಕ್ಷಣದ ಅಂಶಗಳನ್ನು ಏಕೀಕರಿಸಲಾದ) ಪರಿಕಲ್ಪನೆಯನ್ನು ವ್ಯಾಪಕವಾಗಿ ಸ್ವೀಕರಿಸಲಾಗಿದೆ. ಭಾರತವು ಈ ನಿಟ್ಟಿನಲ್ಲಿ ಸಾಕಷ್ಟು ಪೂರಕ ನೀತಿ ಚೌಕಟ್ಟನ್ನು ರೂಪಿಸಿದೆ ಹಾಗೂ ಮಕ್ಕಳ ಈ ಹಂತದ ಬೆಳವಣಿಗೆಗಾಗಿ ಕೆಲವೊಂದು ಪ್ರಮುಖ ಉಪಕ್ರಮಗಳಿಗೆ ಚಾಲನೆ ನೀಡಿದ್ದು, ಇದನ್ನು ಈ ಪ್ರಬಂಧದ ಮುಂದಿನ ಹಂತದಲ್ಲಿ ಚರ್ಚಿಸಲಾಗುವುದು. ಇದರ ಪರಿಣಾಮವಾಗಿ ಸಾಕಷ್ಟು ಅಲ್ಲದಿದ್ದರೂ, ಕಳೆದ ಐವತ್ತು ವರ್ಷಗಳಲ್ಲಿ, ಎಳೆಯ ಮಕ್ಕಳಿಗೆ ಸಾರ್ವಜನಿಕ ಮತ್ತು ಖಾಸಗಿ ಶಿಕ್ಷಣವನ್ನು ಒದಗಿಸುವಲ್ಲಿ ಗಮನಾರ್ಹ ಪ್ರಗತಿಯನ್ನು ಸಾಧಿಸಲಾಗಿದೆ.

## ECD, ECE ಮತ್ತು ECCE ನಡುವಿನ ಭಿನ್ನತೆ

ಸಂಶೋಧನೆಯು ಸಾಬೀತುಪಡಿಸಿರುವ, ಮಗುವಿನ ಬೆಳವಣಿಗೆಯ ಮೂರು ಪ್ರಮುಖ ತತ್ವಗಳು ಕೇವಲ 'ಶಾಲಾ ಪೂರ್ವ ಶಿಕ್ಷಣ'ದಿಂದ ಹೆಚ್ಚು ಏಕೀಕೃತ ಮತ್ತು ಸಮಗ್ರ ಆರಂಭಿಕ

ಬಾಲ್ಯದ ಅಭಿವೃದ್ಧಿ ಕಾರ್ಯಕ್ರಮಗಳ ಪರಿಕಲ್ಪನೆಗೆ ಎಳೆಯ ಮಕ್ಕಳಿಗಾಗಿ ಯೋಜಿಸಿದ ಕಾರ್ಯಕ್ರಮಗಳ ವಿಕಸನಕ್ಕೆ ಕಾರಣವಾಗಿವೆ. ಈ ತತ್ವಗಳು ಹೇಳುವುದೇನೆಂದರೆ: (i) ಮಗುವಿನ ಆರಂಭಿಕ ಅನುಭವಗಳು ಮತ್ತು ಫಲಿತಾಂಶಗಳು, ಆತನು/ಆಕೆಯು ತದನಂತರದ ಕಾರ್ಯಯೋಜನೆಗಳಿಂದ ಗಳಿಸುವ ಲಾಭದ ಪ್ರಮಾಣವನ್ನು ನಿರ್ಧರಿಸುತ್ತವೆ. ಏಕೆಂದರೆ ಮಗುವಿನ ಬೆಳವಣಿಗೆಯು ನಿರಂತರ ಮತ್ತು ಸಂಚಿತ ಪ್ರಕ್ರಿಯೆಯಾಗಿದೆ. ಅಮೇರಿಕದಲ್ಲಿ ಇತ್ತೀಚೆಗೆ ನಡೆಸಲಾಗಿರುವ ಅಧ್ಯಯನದ ಪ್ರಕಾರ, 3 ವರ್ಷಗಳ ವಯಸ್ಸಿನ ಹೊತ್ತಿಗೆಯೇ ವಿವಿಧ ಸಾಮಾಜಿಕ ಗುಂಪುಗಳ ಮಕ್ಕಳ ನಡುವೆ ಶಬ್ದಕೋಶದ ಮೂಲಕ ಅಳೆಯಲಾದ ಕಲಿಕಾ ಅಂತರವು ದೊಡ್ಡ ಪ್ರಮಾಣದಲ್ಲಿತ್ತು (ವಿಶ್ವ ಬ್ಯಾಂಕ್, 2005b); (ii) ಮಗುವಿನ ಸಂಜ್ಞಾನಾತ್ಮಕ ಕಲಿಕೆಯ ಮೇಲೆ ಮಗುವಿನ ಆರೋಗ್ಯ (ಅಪೌಷ್ಠಿಕತೆ, ಕಬ್ಬಿಣಾಂಶ ಮತ್ತು ಸೂಕ್ಷ್ಮ ಪೋಷಕಾಂಶಗಳ ಕೊರತೆ, ಮತ್ತು ಪರಾವಲಂಬಿಗಳ ಸೋಂಕುಗಳು) ಮತ್ತು ಮನೆಯ ಪರಿಸರದ ಗುಣಮಟ್ಟ ಸೇರಿದಂತೆ ಆತನ/ಆಕೆಯ ಸಾಮಾಜಿಕ – ಆರ್ಥಿಕ ಸ್ಥಿತಿಗತಿಯು ಪ್ರಭಾವ ಬೀರುತ್ತದೆ. ಆರೋಗ್ಯ, ಪೌಷ್ಠಿಕಾಂಶ ಮತ್ತು ಶಿಕ್ಷಣ/ ಮಾನಸಿಕ – ಸಾಮಾಜಿಕ ಬೆಳವಣಿಗೆ ಇತ್ಯಾದಿಗಳು ಸಹಕ್ರಿಯೆಯಾಗಿ ಪರಸ್ಪರ ಸಂಬಂಧಿಸಿವೆ. ಹೀಗಾಗಿ ಸಮಗ್ರ ವಿಧಾನದ ಮೂಲಕ ಮಕ್ಕಳ ಅಗತ್ಯತೆಗಳಿಗೆ ಗಮನ ನೀಡುವುದಕ್ಕಾಗಿ ಇದು ಬಲವಾದ ವಾದವನ್ನು ಮುಂದಿಡುತ್ತದೆ; ಮತ್ತು (iii) ಕಾರ್ಯಕ್ರಮಗಳು ಮಗು ಮಾತ್ರವಲ್ಲದೆ ಕುಟುಂಬ ಸೇರಿದಂತೆ ಮಗುವಿನ ಒಟ್ಟಾರೆ ಸನ್ನಿವೇಶಕ್ಕೆ ಗಮನ ನೀಡಿದರೆ ಮಗುವಿನ ಬೆಳವಣಿಗೆಯ ಲಾಭಗಳನ್ನು ಅತ್ಯುತ್ತಮಗೊಳಿಸಬಹುದು ಮತ್ತು ಹೆಚ್ಚು ಸುಸ್ಥಿರತೆಯನ್ನು ಸಾಧಿಸಬಹುದು.

ಪರಿಣಾಮವಾಗಿ, ಆರಂಭಿಕ ಬಾಲ್ಯದ ಅಭಿವೃದ್ಧಿ (ECD) ಮತ್ತು/ಅಥವಾ ECCE ಯನ್ನು ಎಳೆಯ ಮಕ್ಕಳೊಂದಿಗೆ ಕೆಲಸ ಮಾಡುತ್ತಿರುವ ಭಾರತೀಯ ವೃತ್ತಿಪರರು ಅರ್ಥ ಮಾಡಿಕೊಂಡಂತೆ, ಇದು ಪ್ರಸವಪೂರ್ವದಿಂದ 6/8 ವರ್ಷದ ತನಕದ ಮಕ್ಕಳಿಗೆ ನೆರವು ಒದಗಿಸುವ ಪೌಷ್ಠಿಕಾಂಶ, ಆರೋಗ್ಯ, ಮತ್ತು ಆರಂಭಿಕ ಬಾಲ್ಯದ ಶಿಕ್ಷಣದ ಸಮಗ್ರ ಮತ್ತು ಏಕೀಕೃತ ಕಾರ್ಯಕ್ರಮವಾಗಿದ್ದು, ಜೀವನಚಕ್ರದ ದೃಷ್ಟಿಕೋನದಿಂದ ಮಗುವಿನ ಸಮಗ್ರ ಅಭಿವೃದ್ಧಿಗೆ ಗಮನ ನೀಡುತ್ತದೆ (ಭಾರತೀಯ ಪರಿಕಲ್ಪನೆಯ ಚೌಕಟ್ಟಿಗಾಗಿ ಚಿತ್ರ 1 ಅನ್ನು ನೋಡಿ). ECD ಯ ಈ ನಾಮಕರಣವು ಸಾಪೇಕ್ಷವಾಗಿ ಇತ್ತೀಚಿನದ್ದಾಗಿದ್ದು, 1975ರಲ್ಲೇ, ಈ ವ್ಯಾಖ್ಯಾನದ ಮೇಲೆ ಮಾದರೀಕರಣಗೊಂಡು ಮಕ್ಕಳಿಗಾಗಿ ವಿಶ್ವದ ಅತ್ಯಂತ ದೊಡ್ಡ ಕಾರ್ಯಕ್ರಮದ ಪರಿಕಲ್ಪನೆಯನ್ನು ರೂಪಿಸಿ ಕಾರ್ಯರೂಪಕ್ಕೆ ತಂದ ಕೀರ್ತಿಯು ಭಾರತಕ್ಕೆ ಸಲ್ಲುತ್ತದೆ. ಸಮಗ್ರ ಮಕ್ಕಳ ಅಭಿವೃದ್ಧಿ ಸೇವೆಗಳು (Integrated Child Development Services (ICDS)) ಎಂದು ಕರೆಯಲ್ಪಡುವ ಈ ಕಾರ್ಯಕ್ರಮವು ಜೀವನ ಚಕ್ರದ ದೃಷ್ಟಿಕೋನದಿಂದ ಮಕ್ಕಳು, ಗರ್ಭಿಣಿ ಮತ್ತು ಹಾಲುಣಿಸುತ್ತಿರುವ ತಾಯಂದಿರು ಮತ್ತು ತರುಣಾವಸ್ಥೆಯ ಹುಡುಗಿಯರಿಗೆ ಗಮನ ನೀಡುತ್ತದೆ. ಆರೋಗ್ಯ ಮತ್ತು ಪೌಷ್ಠಿಕಾಂಶದ ಜೊತೆಗೆ ಔಪಚಾರಿಕವಲ್ಲದ ಶಾಲಾಪೂರ್ವದ ಶಿಕ್ಷಣವು ಇದರ ಆರು ಘಟಕಗಳಲ್ಲಿ ಒಂದಾಗಿದೆ. ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣ (ECCE) ಎಂಬ ನಾಮಕರಣವು, ಶಿಕ್ಷಣದ ಕುರಿತ ರಾಷ್ಟ್ರೀಯ ನೀತಿಯಲ್ಲಿ ಇದಕ್ಕೆ ಪ್ರತ್ಯೇಕ ಅಧ್ಯಾಯವೊಂದನ್ನು ಮೀಸಲಿಟ್ಟ ನಂತರ 1986ರಲ್ಲಿ ಭಾರತದಲ್ಲಿ ನೀತಿ ಚೌಕಟ್ಟಿನಲ್ಲಿ ತನಗೆ ಸಲ್ಲಬೇಕಾದ ಸ್ಥಾನವನ್ನು ಕಂಡುಕೊಂಡಿತು. ECD ಯ ರೀತಿಯಲ್ಲೇ ECCE ಯನ್ನು, ಸಾಮಾಜಿಕವಾಗಿ ಅನನುಕೂಲತೆಗೆ ಒಳಗಾದ ಪಂಗಡಗಳ, 0-6 ವಯಸ್ಸುಗಳ ನಡುವಿನ ಮಕ್ಕಳ ಆರೈಕೆ ಮತ್ತು ಶಿಕ್ಷಣದ ಏಕೀಕೃತ ಮತ್ತು ಸಮಗ್ರ ಪರಿಕಲ್ಪನೆಯಾಗಿ ನೀತಿಗಳಲ್ಲಿ ವ್ಯಾಖ್ಯಾನಿಸಲಾಯಿತು. ಈ ಮುನ್ನೇರ್ಪಾಡನ್ನು, ಮಗುವಿನ ಬದುಕಿಗೆ ತಳಪಾಯವನ್ನು ಹಾಕಲು ಮತ್ತು ಹುಡುಗಿಯರು ಮತ್ತು ದುಡಿಯುವ ತಾಯಂದಿರಿಗೆ ನೆರವಿನ ಸೇವೆಯಾಗಿ ಪರಿಗಣಿಸಲಾಯಿತು. ಈ ನೀತಿಯು,

ಮುಖ್ಯವಾಗಿ 3-6 ವರ್ಷದ ಮಕ್ಕಳಿಗೆ ECCE ಯ ಆನಂದಕರ ಗುಣಲಕ್ಷಣಕ್ಕೆ ಒತ್ತು ನೀಡಿತು ಹಾಗೂ ಶಿಕ್ಷಣದ ಈ ಆರಂಭಿಕ ಹಂತದಲ್ಲಿ 3 R (ಓದು, ಬರಹ ಮತ್ತು ಗಣಿತ)ಗಳ ಔಪಚಾರಿಕ ಬೋಧನೆಗೆ ಅಸಮ್ಮತಿ ತೋರಿತು. ಆದಾಗ್ಯೂ, ಪ್ರಾಯೋಗಿಕವಾಗಿ, ಮಕ್ಕಳಿಗಾಗಿ ಇರುವ ಈ ECCE ಕಾರ್ಯಕ್ರಮಗಳು, ನಿರ್ದಿಷ್ಟ ಕಾರ್ಯಕ್ರಮವು ಪೂರೈಸುವ ಆದ್ಯತೆಯನ್ನು ಅನುಸರಿಸಿ ಅನೇಕ ಹೆಸರುಗಳು ಮತ್ತು ವ್ಯಾಖ್ಯಾನಗಳನ್ನು ಪಡೆದಿವೆ. ಇವು, 3-6 ವರ್ಷಗಳ ವಯಸ್ಸಿನ ಶಾಲಾಪೂರ್ವದ ಶಿಕ್ಷಣದ ಮೇಲೆ (ಉದಾ: ಪ್ರಿ-ನರ್ಸರಿಗಳು, ನರ್ಸರಿಗಳು, ಕಿಂಡರ್ಗಾರ್ಟನ್‌ಗಳು, ಸಿದ್ಧತಾ ಶಾಲೆಗಳು, ಪೂರ್ವ ಪ್ರಾಥಮಿಕ ಇತ್ಯಾದಿ) ಮಾತ್ರವೇ ಗಮನ ಹರಿಸುವ ಆರಂಭಿಕ ಬಾಲ್ಯದ ಶಿಕ್ಷಣ (Early Childhood Education (ECE))/ ಶಾಲಾ ಪೂರ್ವ ಶಿಕ್ಷಣ ಕಾರ್ಯಕ್ರಮಗಳನ್ನು ಒಳಗೊಂಡಿವೆ. ಇವು ಯಾವುದೇ ಆರೋಗ್ಯ ಅಥವಾ ಪೌಷ್ಠಿಕಾಂಶದ ವಿಚಾರಗಳನ್ನು ಒಳಗೊಂಡಿಲ್ಲ ಹಾಗೂ 'ಯಾವುದಕ್ಕೂ ಸಂಬಂಧವಿಲ್ಲದೆ ಸ್ವತಂತ್ರವಾಗಿವೆ' ಅಥವಾ ಪ್ರಾಥಮಿಕ ಶಾಲೆಗಳ ಅಂಗವೆನಿಸಿವೆ ಮತ್ತು ಸಾಮಾನ್ಯವಾಗಿ ಸರ್ಕಾರೇತರ ಅಥವಾ ಖಾಸಗಿ ವಲಯದಲ್ಲಿವೆ.

ECCE ಹಂತವು ಅದಾಗಿಯೇ ಎರಡಕ್ಕಿಂತ ಹೆಚ್ಚು ವಿಶಿಷ್ಟ ಉಪ ಹಂತಗಳನ್ನು ಒಳಗೊಂಡಿದೆ ಹಾಗೂ ಪ್ರತಿಯೊಂದು ಸಹ ತನ್ನದೇ ಆದ ಬೆಳವಣಿಗೆಯ ಆದ್ಯತೆಗಳನ್ನು ಹೊಂದಿದೆ ಎಂಬುದನ್ನು ಈಗ ಬಹು ಮಟ್ಟಿಗೆ ಅರ್ಥ ಮಾಡಿಕೊಳ್ಳಲಾಗುತ್ತಿದೆ (ಚಿತ್ರ 2.1 ನೋಡಿ). ಹೀಗೆ ECCE ಅನ್ನು ಮುಂದೆ (a) ಪ್ರಸವಪೂರ್ವದಿಂದ ಹಿಡಿದು ಎರಡೂವರೆಯಿಂದ ಮೂರು ವರ್ಷಗಳು; (b) 3-4 ವರ್ಷಗಳು ಮತ್ತು (c) 4ರಿಂದ 5/6 ವರ್ಷಗಳೆಂದು ಮತ್ತಷ್ಟು ಉಪಹಂತಗಳಾಗಿ ವರ್ಗೀಕರಿಸಬಹುದು. 'ಪ್ರಸವಪೂರ್ವದಿಂದ ಮೂರು ವರ್ಷ' ಗಳ ಮೊದಲ ಉಪಹಂತಕ್ಕೆ, ತಾಯಿ ಮತ್ತು ಮಗುವಿನ ಆರೋಗ್ಯ ಮತ್ತು ಪೌಷ್ಠಿಕಾಂಶದ ಯೋಗಕ್ಷೇಮವನ್ನು ಖಾತರಿಪಡಿಸುವುದು ಬೆಳವಣಿಗೆಯ ಆದ್ಯತೆಯಾಗಿದೆ. ಏಕೆಂದರೆ ಇದು ಬೆಳವಣಿಗೆಯ ವಿಳಂಬಕ್ಕೆ ಈಡಾಗುವ ಹಂತವಾಗಿದೆ ಹಾಗೂ ಮೆದುಳಿಗೆ ಬೆಳವಣಿಗೆಯ ದೃಷ್ಟಿಯಿಂದ ನಿರ್ಣಾಯಕವಾಗಿದೆ. ಈ ಹಂತದಲ್ಲಿ, ಪೌಷ್ಠಿಕಾಂಶ ಮತ್ತು ಆರೋಗ್ಯದ ಶಿಕ್ಷಣ ಮತ್ತು 'ಆರಂಭಿಕ ಮಾನಸಿಕ – ಸಾಮಾಜಿಕ ಉತ್ತೇಜನೆ'ಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಪೋಷಕರ ಗೃಹ ಉದ್ದಿಷ್ಟ ಆಪ್ತ ಸಮಾಲೋಚನೆಯ ಅಗತ್ಯವಿದೆ. ಮೂರರಿಂದ ನಾಲ್ಕು ವರ್ಷಗಳ ವಯಸ್ಸಿನ ಮಕ್ಕಳಿಗೆ, ಆದ್ಯತೆಯು, 'ನಲಿ-ಕಲಿ (play-way)' ವಿಧಾನವನ್ನು ಬಳಸಿ, ಹೆಚ್ಚು ಸಂಘಟಿತ '*ಕೇಂದ್ರ ಆಧರಿತ ECCE ಕಾರ್ಯಕ್ರಮ*' ದ ಮೂಲಕ ಆರಂಭಿಕ ಕಲಿಕೆ ಮತ್ತು ಸಮಗ್ರ ಬೆಳವಣಿಗೆಯತ್ತ ಬದಲಾಗುತ್ತದೆ. ನಾಲ್ಕರಿಂದ ಆರು ವರ್ಷಗಳ ವಯಸ್ಸಿನ ಮಕ್ಕಳಿಗೆ, ಹೆಚ್ಚು ರಾಚನಿಕ '*ಶಾಲಾ ಸಿದ್ಧತೆ*' ಯ ಅಂಶಗಳನ್ನು ಸೇರಿಸುವುದಕ್ಕಾಗಿ ಈ ಕಾರ್ಯಕ್ರಮವು ಇನ್ನಷ್ಟು ವಿಸ್ತರಣೆಯಾಗುತ್ತದೆ. ಈ ಸಮಗ್ರ ಚೌಕಟ್ಟಿನೊಳಗೆ, ಈ ಪ್ರಬಂಧವು, 3-6 ವರ್ಷಗಳ ವಯಸ್ಸಿನ ಮಕ್ಕಳಿಗಾಗಿ, ಆರಂಭಿಕ ಬಾಲ್ಯದ ಆರೈಕೆ ಮತ್ತು ಶಿಕ್ಷಣದ (ECCE) ನಂತರದ ಎರಡು ಉಪಹಂತಗಳಿಗೆ ಗಮನ ಹರಿಸುತ್ತದೆ.

**ಚಿತ್ರ 2.1 ಸಮಗ್ರ ಮಕ್ಕಳ ಅಭಿವೃದ್ಧಿಗೆ ಭಾರತೀಯ ಪರಿಕಲ್ಪನೆಯ ಚೌಕಟ್ಟು**

| **ನಿರ್ಣಾಯಕಗಳು** | ಪ್ರಸವಪೂರ್ವದಿಂದ ಒಂದು ತಿಂಗಳಿನ ತನಕ | **ಸೂಚಕಗಳು** |
|---|---|---|
| • ತಾಯಿಯ ಆರೋಗ್ಯ, ಪೌಷ್ಠಿಕಾಂಶದ ಸಮರ್ಪಕತೆ ಮತ್ತು ನವಜಾತ ಶಿಶುವಿನ ಆರೈಕೆಯ ಗುಣಮಟ್ಟ | **ಫಲಿತಾಂಶಗಳು**<br>• ಆರೋಗ್ಯಯುತ, | • ತಾಯಿಯು ರಕ್ತಹೀನತೆ ಅಥವಾ ಕಡಮೆ ತೂಕವನ್ನು ಹೊಂದಿಲ್ಲ<br>• ಮಗುವು 2500 ಗ್ರಾಂಗಳಿಗಿಂತ ಹೆಚ್ಚು ತೂಕವನ್ನು ಹೊಂದಿದೆ |

**ನಿರ್ಣಾಯಕಗಳು**

- ಆರಂಭಿಕ ಬಾಲ್ಯದ ಗುಣಮಟ್ಟದ ಆರೈಕೆ ಮತ್ತು ಶಿಕ್ಷಣ
- ವೈಕಲ್ಯತೆಯ ತಪಾಸಣೆ ಸೇರಿದಂತೆ ಮೂಲಭೂತ ಆರೋಗ್ಯ ಸೇವೆಗಳು
- ಪೌಷ್ಠಿಕಾಂಶದ ಸಮರ್ಪಕತೆ ಮತ್ತು ಆಗಾಗ್ಗೆ ಬರುವ ರೋಗಗಳ ಮರುಕಳಿಸುವಿಕೆ
- ಪೋಷಕರ ಸಾಕ್ಷರತೆಯ ಮಟ್ಟ ಮತ್ತು ಮನೆಯಲ್ಲಿ ಶಿಕ್ಷಣವನ್ನು ಪ್ರೋತ್ಸಾಹಿಸುವ ವಾತಾವರಣ

ಮೂರರಿಂದ ಆರು ವರ್ಷಗಳು

**ಫಲಿತಾಂಶಗಳು**

- ಕಲಿಕೆಯಲ್ಲಿ ಆಸಕ್ತಿ ಮತ್ತು ಶಾಲಾ ಸಿದ್ಧತೆ ಕೌಶಲ್ಯಗಳು (ಭಾಷೆ, ಸಂಖ್ಯಾ ಜ್ಞಾನ ಮತ್ತು ಮಾನಸಿಕ - ಸಾಮಾಜಿಕ ಕೌಶಲ್ಯಗಳು)
- ಕ್ರಿಯಾಶೀಲತೆ, ಆತ್ಮವಿಶ್ವಾಸ ಮತ್ತು ಪರಿಸರದ ಕುರಿತು ಅರಿವು
- ಆಗಾಗ್ಗೆ ಮರುಕಳಿಸುವ ರೋಗಗಳಿಂದ ಮುಕ್ತಿ, ಪೌಷ್ಠಿಕಾಂಶದ ಭದ್ರತೆ
- ಗುರುತಿಸಲಾದ ಯಾವುದೇ ವೈಕಲ್ಯದ ನಿಭಾವಣೆ

**ಸೂಚಕಗಳು**

- ಆರಂಭಿಕ ಬಾಲ್ಯದ ಆರೈಕೆ ಮತ್ತು ಶೈಕ್ಷಣಿಕ ಚಟುವಟಿಕೆಗಳಲ್ಲಿ ಸಕ್ರಿಯ ಪಾಲ್ಗೊಳ್ಳುವಿಕೆ

**********

- ಅನುಭವವನ್ನು ಆತ್ಮವಿಶ್ವಾಸದಿಂದ ವಿವರಿಸುವ ಸಾಮರ್ಥ್ಯ
- ಕುತೂಹಲವನ್ನು ತೋರಿಸುವುದು
- ವಯಸ್ಸಿಗೆ ಸೂಕ್ತವೆನಿಸುವ ಸ್ವಸಹಾಯ ಮತ್ತು ಸಾಮಾಜಿಕ ಕೌಶಲ್ಯಗಳು
- ವಯಸ್ಸಿಗೆ ಸೂಕ್ತವಾದ ತೂಕ ಮತ್ತು ಎತ್ತರ
- ಶಾಲಾಪೂರ್ವ ಶಾಲೆಯಲ್ಲಿ ನಿರಂತರ ಹಾಜರಾತಿ

**ನಿರ್ಣಾಯಕಗಳು**

- ಆರಂಭಿಕ ಬಾಲ್ಯದ ಆರೈಕೆ ಮತ್ತು ಶೈಕ್ಷಣಿಕ ಅನುಭವ/ ಶಾಲಾ ಸಿದ್ಧತೆ
- ಶಾಲಾ ಶಿಕ್ಷಣ ಅವಕಾಶ
- ಪೌಷ್ಠಿಕಾಂಶದ ಸಮರ್ಪಕತೆ
- ಶಾಲೆಯ ಗುಣಮಟ್ಟ
- ಸಾಮಾಜಿಕ - ಸಾಂಸ್ಕೃತಿಕ ಅಂಶಗಳು -ಒಳಗೂಡಿಸುವಿಕೆಯ ಪ್ರಮಾಣ (ಲಿಂಗ, ಬುಡಕಟ್ಟು, ಜಾತಿ, ಇತ್ಯಾದಿ)
- ಕಲಿಕಾ ಅಸಾಮರ್ಥ್ಯಗಳನ್ನು ಆರಂಭದಲ್ಲಿಯೇ ಕಂಡುಹಿಡಿಯುವುದು
- ಸಾಮಾಜಿಕ ರೂಢಿ, ಆದರ್ಶ ಮಾದರಿಗಳು ಮತ್ತು ಮನೆಯ ಉತ್ತೇಜನಕಾರಿ ಪರಿಸರ
- ಸುರಕ್ಷಿತ ನೀರು ಮತ್ತು ನಿರ್ಮಲೀಕರಣ, ನಿರಂತರ ಹಾಜರಾತಿಯನ್ನು ಪರಿಣಾಮಿಸುವ, ಕ್ರಿಮಿ ಮತ್ತು ಸೋಂಕು ಬಾಧಿಸುವ ಘಟನೆಗಳು
- ಮಹಿಳಾ ಬೋಧಕರು

ಆರರಿಂದ ಎಂಟು ವರ್ಷಗಳು

**ಫಲಿತಾಂಶಗಳು**

- ಸಹವಾಸಪ್ರಿಯತೆ, ಆತ್ಮವಿಶ್ವಾಸ/ ಆತ್ಮಗೌರವ
- ಕಲಿಕೆಯಲ್ಲಿ ನಿರಂತರ ಆಸಕ್ತಿಯೊಂದಿಗೆ ಓದುವ ಮತ್ತು ಬರೆಯುವ ಸಾಮರ್ಥ್ಯ
- ರಕ್ತಹೀನತೆ ಮತ್ತು ಆಗಾಗ್ಗೆ ಕಾಡುವ ರೋಗಗಳಿಂದ ಮುಕ್ತಿ

**ಸೂಚಕಗಳು**

- 8ನೇ ವಯಸ್ಸಿನೊಳಗೆ 2ನೇ ತರಗತಿಗೆ ಬೇಕಾಗುವ ಸಾಮರ್ಥ್ಯವನ್ನು ತೋರಿಸುವುದು
- ನಿರಂತರ ಹಾಜರಾತಿ
- ಜಂತು ಹುಳುಗಳ ಬಾಧೆ ಅಥವಾ ರಕ್ತಹೀನತೆ ಇಲ್ಲದೆ ಇರುವುದು

**ನಿರ್ಣಾಯಕಗಳು**

- ಶಾಲೆಯ ಗುಣಮಟ್ಟ
- ಸಾಮಾಜಿಕ - ಸಾಂಸ್ಕೃತಿಕ ಅಂಶಗಳು -ಒಳಗೂಡಿಸುವಿಕೆ (ಲಿಂಗ, ಬುಡಕಟ್ಟು, ಜಾತಿ), ಸಾಮಾಜಿಕ ರೂಢಿ
- ಶಾಲೆ ಸೇರಲು ಅನುವು ಮಾಡಿಕೊಡುವಂತಹ ಆರೋಗ್ಯ
- ಕಲಿಕಾ ಅಸಾಮರ್ಥ್ಯಗಳನ್ನು ಆರಂಭದಲ್ಲಿಯೇ ಕಂಡುಹಿಡಿಯುವುದು
- ಕ್ರಿಮಿ ಮತ್ತು ಸೋಂಕು ಬಾಧಿಸುವುದು, ಪೌಷ್ಠಿಕಾಂಶದ ಮಟ್ಟ (ಮುಖ್ಯವಾಗಿ ಹುಡುಗಿಯರಲ್ಲಿ)
- ಸಮುದಾಯ ಮತ್ತು ಮನೆಯ ಉತ್ತೇಜಕ ಪರಿಸರ,

ಎಂಟರಿಂದ ಹನ್ನೆರಡು + ವರ್ಷಗಳು

**ಫಲಿತಾಂಶಗಳು**

- ತಕ್ಕ ಮಟ್ಟದ ಸಾಕ್ಷರತೆ ಮತ್ತು ಸಂಖ್ಯಾ ಕೌಶಲ್ಯಗಳೊಂದಿಗೆ ಪ್ರಾಥಮಿಕ ಶಾಲೆಯನ್ನು ಯಶಸ್ವಿಯಾಗಿ ಪೂರ್ಣಗೊಳಿಸುವುದು
- ಕ್ರಿಯಾಶೀಲ ಕಲಿಕಾ ಸಾಮರ್ಥ್ಯ
- ಉತ್ತಮ ಆರೋಗ್ಯ, ಪೌಷ್ಠಿಕಾಂಶ
- ಸಕಾರಾತ್ಮಕ ಸ್ವಚಿತ್ರ ಪರಿಸ್ಥಿತಿಯನ್ನು ನಿಭಾಯಿಸುವ ಮತ್ತು ಸಾಮಾಜಿಕ ಕೌಶಲ್ಯಗಳು

**ಸೂಚಕಗಳು**

- ಶಾಲೆಯಲ್ಲಿ ನಿರಂತರ ಹಾಜರಾತಿ
- ಕಲಿಯಲು ಉತ್ಸುಕತೆ
- ಸಹವಾಸಪ್ರಿಯತೆ, ಕ್ರಿಯಾಶೀಲತೆ
- 11ನೇ ವಯಸ್ಸಿನೊಳಗೆ 5ನೇ ತರಗತಿಗೆ ಬೇಕಾಗುವ ಸಾಮರ್ಥ್ಯವನ್ನು ತೋರಿಸುವುದು
- ಶಿಕ್ಷಣವನ್ನು ಮುಂದುವರಿಸಲು ಪ್ರೇರಣೆ ಮತ್ತು ಆತ್ಮವಿಶ್ವಾಸ

**ಮೂಲ: ವಿಶ್ವ ಬ್ಯಾಂಕ್, 2004, ಪು. 12.**

**ನಕಾಶೆ 2.1**

**ಮಗು ಅಭಿವೃದ್ಧಿ ಸೂಚ್ಯಂಕ**




ಹೆಚ್ಚಿನ ಎಲ್ಲಾ ರಾಜ್ಯಗಳು ಮಗುವಿನ ಬೆಳವಣಿಗೆಗೆ ಸಂಬಂಧಿಸಿದ ಮಾನದಂಡಗಳಲ್ಲಿ ಸುಧಾರಣೆಯನ್ನು ತೋರಿಸಿದ್ದರೂ ಸುಧಾರಣೆಗಳಲ್ಲಿ ವ್ಯತ್ಯಯವಿದೆ ಎಂಬುದನ್ನು ನಕಾಶೆ 2.1 ತೋರಿಸುತ್ತದೆ. ಈಗಾಗಲೇ ಮಗುವಿನ ಬೆಳವಣಿಗೆಗೆ ಸಂಬಂಧಿಸಿದಂತೆ ಉನ್ನತ ಮಟ್ಟವನ್ನು ಸಾಧಿಸಿರುವ ರಾಜ್ಯಗಳು ಸ್ವಲ್ಪ ಮಟ್ಟಿಗೆ ಸುಧಾರಣೆ ಕಂಡಿವೆ. ಆದರೆ ಬಿಹಾರ ಮತ್ತು ಉತ್ತರ ಪ್ರದೇಶದಂತಹ ತೀರಾ ಕಡಮೆ ಮೂಲಾಧಾರ ಸೂಚಕಗಳನ್ನು ಹೊಂದಿರುವ ರಾಜ್ಯಗಳು ವೇಗವಾಗಿ ಸುಧಾರಣೆ ಹೊಂದಿವೆ. ಆದಾಗ್ಯೂ, ಬಿಹಾರ, ಉತ್ತರ ಪ್ರದೇಶ, ರಾಜಸ್ಥಾನ ಮತ್ತು ಮಧ್ಯಪ್ರದೇಶ - ಇವು ಅಖಿಲ ಭಾರತ ಸರಾಸರಿಯ ಅಂಕಿ ಅಂಶಗಳಿಗಿಂತ ಕೆಳಗೆಯೇ ಉಳಿದಿವೆ. ಮಗುವಿನ ಬೆಳವಣಿಗೆಯ ದೃಷ್ಟಿಯಿಂದ ಈ ರಾಜ್ಯಗಳು ಹಿಂದುಳಿದ ರಾಜ್ಯಗಳಾಗಿದ್ದು ಅವು ಮಗುವಿಗೆ ಸಂಬಂಧಿಸಿದ ಫಲಿತಾಂಶಗಳನ್ನು ಸಾಧಿಸಲು ಹೆಚ್ಚು ಕೇಂದ್ರಿತ ಪ್ರಯತ್ನಗಳನ್ನು ಮಾಡಬೇಕಾದ ಅಗತ್ಯವಿದೆ. ಇದಕ್ಕಾಗಿ, ಅವರ ಮುನ್ನೇರ್ಪಾಡಿನ ಅಗತ್ಯತೆಗಳು ಹಾಗೂ ಮಗುವಿನ ಬೆಳವಣಿಗೆಯ ಸುಧಾರಣೆಗೆ ಇರುವ ಸಾಮಾಜಿಕ -

**ನಕಾಶೆ 2.2**

**ಪ್ರತಿರಕ್ಷಣೆ Vs ಅಪೌಷ್ಟಿಕತೆ ಸೂಚಕಗಳನ್ನು ಬಳಸಿ**
**CDI ಗಳಲ್ಲಿನ ತುಲನಾತ್ಮಕ ಭಿನ್ನತೆ (2004-06)**




***ತಮಿಳು ನಾಡು *ಎಚ್ ಪಿ *ಕೇರಳ *ಜಾರ್ಖಂಡ್ *ಮಹಾರಾಷ್ಟ್ರ *ಗುಜರಾತ್ *ಹರ್ಯಾಣ *ಕರ್ನಾಟಕ *ಗೋವಾ *ಪಶ್ಚಿಮ ಬಂಗಾಳ *ದೆಹಲಿ *ಛತ್ತೀಸ್ ಗಢ *ಒಡಿಶಾ *ಏ ಪಿ * ಯು ಪಿ *ಅಖಿಲ ಭಾರತ *ಪಂಜಾಬ್*ಸಿಕ್ಕಿಂ *ಮೇಘಾಲಯ *ತ್ರಿಪುರ *ಎಂ ಪಿ *ಮಿಜೋರಾಮ್ *ಉತ್ತರಾಖಂಡ *ಬಿಹಾರ *ಅಸ್ಸಾಮ್ *ಮಣಿಪುರ *ರಾಜಸ್ಥಾನ *ಜಮ್ಮು ಮತ್ತು ಕಾಶ್ಮೀರ *ಅರುಣಾಚಲ್ *ನಾಗಾಲ್ಯಾಂಡ್**

**4 ಸೂಚಕಗಳ CDI** **5 ಸೂಚಕಗಳ CDI**

ಆದಗ್ಯೂ, CDI ಯಲ್ಲಿ ಪ್ರತಿರಕ್ಷಣೆಯ ಬದಲಿಗೆ ಅಪೌಷ್ಟಿಕತೆಯ ಸೂಚಕಗಳನ್ನು ಪರಿಗಣಿಸಿದರೆ, ಸಾಪೇಕ್ಷವಲ್ಲದ CDI ಮೌಲ್ಯಗಳ ದೃಷ್ಟಿಯಿಂದ ಚಿತ್ರಣವು ಬದಲಾಗುತ್ತದೆ. ಆಸಕ್ತಿಯ ವಿಷಯವೆಂದರೆ, ಮೇಲ್ಮಟ್ಟದಲ್ಲಿರುವ ರಾಜ್ಯಗಳ ವಿಚಾರದಲ್ಲಿ ಈ ಬದಲಾವಣೆಯು ಹೆಚ್ಚು ಗಣನೀಯ ಎನಿಸುತ್ತದೆ. ಉದಾಹರಣೆಗೆ, ತಮಿಳು ನಾಡು, ಹಿಮಾಚಲ ಪ್ರದೇಶ ಮತ್ತು ಕೇರಳ (ನಕಾಶೆ 2.2). ಪ್ರಾಯಶಃ, ಉತ್ತಮ ಆಡಳಿತ, ಸಾಕ್ಷರತೆಯ ಮಟ್ಟ, ಇತ್ಯಾದಿಯೊಂದಿಗೆ, ಶಿಕ್ಷಣ ಮತ್ತು ಪ್ರತಿರಕ್ಷಣೆಯ ಸೂಚಕಗಳನ್ನು ಸೇರಿಸಿದಾಗ, ಈ ರಾಜ್ಯಗಳು ಉನ್ನತ CDI ಮಟ್ಟಗಳನ್ನು ತೋರಿಸುತ್ತವೆ. ಏಕೆಂದರೆ ಎರಡೂ ಸಹ ಗುಣಮಟ್ಟದ ಸೇವಾ ತಲುಪಿಸುವಿಕೆಗೆ ಸಂಬಂಧಿಸಿವೆ. ಆದಾಗ್ಯೂ, ಮಗುವಿನ ಬೆಳವಣಿಗೆಯ ಫಲಿತಾಂಶಗಳ ದೃಷ್ಟಿಯಿಂದ ಪರಿಣಾಮವನ್ನು ಸೇರಿಸಿದಾಗ (ಉದಾ: ಕಡಿಮೆ ತೂಕ ಮತ್ತು ಕುಂಠಿತ ಬೆಳವಣಿಗೆಯ ಮಕ್ಕಳು), ರಾಜ್ಯಗಳ ನಡುವಿನ ವ್ಯತ್ಯಾಸಗಳು ಕಡಿಮೆ ಆಗುತ್ತದೆ. ಪರಿಣಾಮಕಾರಿ ಆಹಾರ ಕಾರ್ಯಕ್ರಮಗಳ ಹಿನ್ನೆಲೆಯನ್ನು ಹೊಂದಿರುವ ತಮಿಳುನಾಡಿನಂತಹ

**ವಿಭಾಗ – III**

# ECCE – ಸಮಾನತೆಯ ವಿಚಾರ

**ECCE** ಈಗ ಭಾರತೀಯ ಹಿನ್ನೆಲೆಯಲ್ಲಿ ಸಮಾನತೆಯ ಗಮನಾರ್ಹ ವಿಚಾರವಾಗಿ ಹೊರಹೊಮ್ಮುತ್ತಿದೆ. ಎಂಟನೇ ಯೋಜನೆಯ ನಂತರ ICDS ಕಾರ್ಯಕ್ರಮಗಳ ಗಮನಾರ್ಹ ವಿಸ್ತರಣೆಯ ಹೊರತಾಗಿಯೂ, ಇತ್ತೀಚಿನ NFHS-3 ದತ್ತಾಂಶದ ಪ್ರಕಾರ, ದೇಶದ ಮಕ್ಕಳ ಸ್ಥಿತಿಗತಿಯು ತೃಪ್ತಿಕರ ಮಟ್ಟಕ್ಕಿಂತ ಇನ್ನೂ ದೂರದಲ್ಲಿದೆ ಎನ್ನುವ ವಿಚಾರ ತಿಳಿದು ಬಂದಿದೆ.ಮೂರು ವರ್ಷದ ವಯಸ್ಸಿನ ಎಲ್ಲಾ ಮಕ್ಕಳ ಪೈಕಿ ಸರಿಸುಮಾರು 46 ಶೇಕಡಾದಷ್ಟು ಮಕ್ಕಳು ಕಡಮೆ ತೂಕವನ್ನು ಹೊಂದಿದ್ದಾರೆ. ಎಂಟು ವರ್ಷಗಳ ಹಿಂದೆ ನಡೆಸಿದ ಕೊನೆಯ ಸಮೀಕ್ಷೆಗಿಂತ ಒಂದು ಶೇಕಡಾ ಅಂಕದಷ್ಟು ಸುಧಾರಣೆ ಇದರಲ್ಲಿ ಕಂಡು ಬಂದಿದೆ. ಆರರಿಂದ 35 ತಿಂಗಳುಗಳ ಮಕ್ಕಳ ಪೈಕಿ ಸರಿಸುಮಾರು 80 ಶೇಕಡಾದಷ್ಟು ಮಂದಿ ರಕ್ತಹೀನತೆಯಿಂದ ಬಳಲುತ್ತಿದ್ದರೆ, ಕೇವಲ 23 ಶೇಕಡಾದಷ್ಟು ಮಕ್ಕಳಿಗೆ ಹುಟ್ಟಿದ ಒಂದು ಗಂಟೆಯೊಳಗೆ ಸ್ತನ್ಯಪಾನ ದೊರೆಯುತ್ತದೆ ಹಾಗೂ ಸುಮಾರು 46 ಶೇಕಡಾದಷ್ಟು ಮಕ್ಕಳಿಗೆ ಮೊದಲ ಆರು ತಿಂಗಳುಗಳಲ್ಲಿ ಸ್ತನ್ಯಪಾನ ಮಾತ್ರ ಉಣಿಸಲಾಗುತ್ತದೆ. ಪ್ರತಿ 1000 ದಲ್ಲಿ ಸುಮಾರು 57 ಮಕ್ಕಳು ನಾಲ್ಕನೇ ವಯಸ್ಸಿಗೆ ಕಾಲಿಡುವ ಮೊದಲೇ ಮರಣ ಹೊಂದುತ್ತವೆ. ಮೂರರಿಂದ ಆರು ವರ್ಷಗಳ ನಡುವಿನ 60 ಶೇಕಡಾಕ್ಕಿಂತಲೂ ಹೆಚ್ಚಿನ ಮಕ್ಕಳಿಗೆ ಯಾವುದೇ ರೀತಿಯ ಶಾಲಾಪೂರ್ವದ ಶಿಕ್ಷಣ ದೊರೆಯುವುದಿಲ್ಲ. (ರೇಖಾಚೌಕ 3.1 ನೋಡಿ).

ಸಮಾನತೆಯ ವಿಚಾರವು ಇಲ್ಲಿ ಏಕೆ ಉದ್ಭವಿಸುತ್ತದೆ ಎಂದರೆ, ಒಂದು ಕಡೆ ಶ್ರೀಮಂತ ಕುಟುಂಬಗಳ ಮಕ್ಕಳು ಎರಡು ವರ್ಷ ವಯಸ್ಸಿನಿಂದಲೇ ಒಂದಲ್ಲ ಒಂದು ರೀತಿಯ ECCE ಸೌಲಭ್ಯವನ್ನು ಪಡೆಯುತ್ತಾರೆ. ಇದು ಮುಖ್ಯವಾಗಿ ನಗರ ವಲಯಗಳಲ್ಲಿ ಖಾಸಗಿ ಸೌಲಭ್ಯಗಳ ಶೀಘ್ರ ವಿಸ್ತರಣೆಯ ಫಲಿತಾಂಶವಾಗಿದೆ. ಇನ್ನೊಂದೆಡೆ, ಬಡ ಕೌಟುಂಬಿಕ ಪರಿಸರದ ಕಾರಣ ಹೆಚ್ಚಿನ ಅಗತ್ಯತೆ ಇರುವ ದುರ್ಬಲ ಸಾಮಾಜಿಕ – ಆರ್ಥಿಕ ವರ್ಗದ ಮಕ್ಕಳಿಗೆ ಉತ್ತಮ ಗುಣಮಟ್ಟದ ಕಾರ್ಯಕ್ರಮಗಳು ಸುಲಭದಲ್ಲಿ ದೊರೆಯುವುದಿಲ್ಲ. ಏಕೆಂದರೆ ECCE ಎನ್ನುವುದು ಸಾರ್ವಜನಿಕ ವಲಯದಲ್ಲಿ ಆದ್ಯತೆಯ ವಿಷಯವಲ್ಲ. ಸೀಮಿತ ಸಾರ್ವಜನಿಕ ಸಂಪನ್ಮೂಲಗಳ ಕಾರಣ ಪ್ರಾಥಮಿಕ ಶಿಕ್ಷಣಕ್ಕೆ ಆದ್ಯತೆಯನ್ನು ನೀಡಲಾಗುತ್ತಿದೆ ಎನ್ನುವ ವಾದವನ್ನು ಈ ನಿಟ್ಟಿನಲ್ಲಿ ಮುಂದಿಡಲಾಗುತ್ತಿದೆ. ಆದರೆ ತಳ ಮಟ್ಟದ ವಾಸ್ತವಿಕತೆ ಏನೆಂದರೆ, ECCE ಕೇಂದ್ರಗಳ ಅನುಪಸ್ಥಿತಿಯ ಕಾರಣ ಎಳೆಯ ಮಕ್ಕಳು ಪ್ರಾಥಮಿಕ ಶಾಲೆಗಳಲ್ಲಿ "ಜನಸಂದಣಿ" ಉಂಟು ಮಾಡುತ್ತಿದ್ದು, ಸ್ಥಳಾವಕಾಶ ಮತ್ತು ಶಿಕ್ಷಕರು – ವಿದ್ಯಾರ್ಥಿಯ ಅನುಪಾತದ ದೃಷ್ಟಿಯಿಂದ ತರಗತಿಯ ಗುಣಮಟ್ಟದ ಮೇಲೆ ಪರಿಣಾಮ ಉಂಟಾಗುತ್ತಿದೆ. ಅಲ್ಲದೆ ಪ್ರಾಥಮಿಕ ಶಾಲೆಗಳಲ್ಲಿ ಶಾಲೆ ಬಿಡುತ್ತಿರುವವರ ಸಂಖ್ಯೆಯಲ್ಲಿ ಹಾಗೂ ಪುನರಾವರ್ತನೆಯ ದರದಲ್ಲಿ ಹೆಚ್ಚಳ ಉಂಟಾಗುತ್ತಿದೆ. ಪ್ರಾಥಮಿಕ ಶಾಲೆಗಳಲ್ಲಿ ಸುಮಾರು 9.3 ಶೇಕಡಾದಷ್ಟು ಮಕ್ಕಳು 'ಕಡಮೆ ವಯೋಮಾನ'ದವರು ಎಂಬುದು ಕಂಡು ಬಂದಿದೆ (Mehta (ಮೆಹ್ತಾ), 2007). ಅಲ್ಲದೆ ಸಾಕಷ್ಟು ಆರಂಭಿಕ ಬಾಲ್ಯದ ಶಿಕ್ಷಣ ಕೇಂದ್ರಗಳನ್ನು ನೀಡದೆ ಪ್ರಾಥಮಿಕ ಶಿಕ್ಷಣವನ್ನು ವಿಸ್ತರಿಸುವುದರಿಂದ ಸಾಕಷ್ಟು ಶಾಲಾ ಸಿದ್ಧತೆ ಇಲ್ಲದೆಯೇ ಮಕ್ಕಳು ಶಾಲೆಗೆ ಬರುವಂತಾಗುತ್ತದೆ. ಈ ಸಮಸ್ಯೆಯನ್ನು ಪರಿಹರಿಸಲು ನಂತರ ವ್ಯವಸ್ಥೆಯು 'ಸರಿಪಡಿಸುವ ಪರಿಹಾರ ಕ್ರಮ'ಗಳಲ್ಲಿ ಹೂಡಿಕೆಮಾಡಬೇಕಾಗುತ್ತದೆ.

ಇದು ಖಂಡಿತವಾಗಿಯೂ ಆರ್ಥಿಕವಾಗಿ ಪರಿಣಾಮಕಾರಿ ಅಲ್ಲ. “ಒಂದು ಸಮಸ್ಯೆಯನ್ನು ಆದಷ್ಟು ಮೊದಲೇ ಬಗೆಹರಿಸಿದರೆ ಅದು ಬಹಳಷ್ಟು ಹೆಚ್ಚುವರಿ ಕೆಲಸವನ್ನು ಕಡಮೆ ಮಾಡುತ್ತದೆ” ಎನ್ನುವ ಸರಳ ತರ್ಕದೊಂದಿಗೆ ವಿಳಂಬಿಸಿ ಹೂಡಿಕೆ ಮಾಡುವುದಕ್ಕಿಂತಲೂ ಆರಂಭದಲ್ಲೇ ಹೂಡಿಕೆ ಮಾಡಲು ವಾದವನ್ನು ಮಂಡಿಸುವುದಕ್ಕಾಗಿ ಜಗತ್ತಿನಾದ್ಯಂತ ನಡೆದಿರುವ ಸಂಶೋಧನೆಗಳ ಸಾಕ್ಷ್ಯವನ್ನು ಪೂರ್ವಭಾವಿಯಾಗಿ ಹಂಚಿಕೊಳ್ಳುವ ಅಗತ್ಯವಿದೆ.

**ರೇಖಾ ಚೌಕ 3.1**
**ಮಗುವಿನ ಬೆಳವಣಿಗೆ ಸೂಚ್ಯಂಕ**

“Reaching Out to the Child (ರೀಚಿಂಗ್ ಔಟ್ ಟು ದ ಚೈಲ್ಡ್),” 2004 ಎನ್ನುವ ವಿಶ್ವ ಬ್ಯಾಂಕ್ ವರದಿಯು, ಮಗುವಿನ ಬೆಳವಣಿಗೆ ಸೂಚ್ಯಂಕ (Child Development Index (CDI))ವನ್ನು ಬಳಸಿ ಭಾರತದ ವಿವಿಧ ರಾಜ್ಯಗಳಲ್ಲಿ ಮಗುವಿನ ಬೆಳವಣಿಗೆಯ ಸ್ಥಿತಿಗತಿಯನ್ನು ತೋರಿಸಿತು. ಆರೋಗ್ಯ ಮತ್ತು ಶಿಕ್ಷಣ, ಶಿಶುವಿನ ಬದುಕುಳಿಯುವಿಕೆ ದರ (ISR - IMR ಗೆ ತದ್ವಿರುದ್ಧ), ಸಂಪೂರ್ಣ ಪ್ರತಿರಕ್ಷಣೆಯೊಂದಿಗೆ (FI) ಒಂದು ವರ್ಷ ವಯಸ್ಸಿನ ಮಗು, ನಿವ್ವಳ ಶಾಲಾ ದಾಖಲಾತಿ (NER) ಮತ್ತು ಪ್ರಾಥಮಿಕ ಶಾಲಾ ಪೂರ್ಣಗೊಳಿಸುವಿಕೆ ದರ (PCR) ಮುಂತಾದುವುಗಳನ್ನು ಒಳಗೊಂಡಂತೆ ಮಗುವಿನ ಬೆಳವಣಿಗೆಯ ಮೂಲಭೂತ ಆಯಾಮಗಳಿಗೆ ಸಂಬಂಧಿಸಿದ ಆರಂಭಿಕ ವರ್ಷಗಳ ಫಲಿತಾಂಶ ಸೂಚಕಗಳನ್ನು ಬಳಸಿ CDI ಅನ್ನು ಲೆಕ್ಕ ಹಾಕಲಾಯಿತು. ಎಲ್ಲಾ ಸೂಚಕಗಳಿಗೆ ಸಮಾನ ತೂಕವನ್ನು ನೀಡಿ, ಈ ಸೂಚಕಗಳಿಂದ CDI ಅನ್ನು ಲೆಕ್ಕ ಹಾಕಲಾಯಿತು.

CDIj = 1/4 * j (Xi); ಇಲ್ಲಿ CDIj ಎನ್ನುವುದು j ರಾಜ್ಯಕ್ಕೆ ಸಂಬಂಧಿಸಿದ್ದು, I ಎನ್ನುವುದು ಬಳಸಲಾದ ISR(Infant Survival Rate), FI(full immunization), NER(Net School Enrolment) ಮತ್ತು PCR (School Primary Completion Rate) ಮುಂತಾದ ಸೂಚಕವಾಗಿದೆ. ಹೀಗಾಗಿ,

**ಮಗುವಿನ ಬೆಳವಣಿಗೆ ಸೂಚ್ಯಂಕ** (CDI) = (ISR*0.25)+(FI*0.25)+(NER*0.25) + (PCR*0.25)

ಈ ಸೂಚ್ಯಂಕವನ್ನು ಪರಿಷ್ಕರಿಸುವುದಕ್ಕಾಗಿ, ಪೌಷ್ಠಿಕಾಂಶ ಮತ್ತು ಆರೋಗ್ಯದ ಸೂಚಕಗಳಿಗಾಗಿ ರಾಷ್ಟ್ರೀಯ ಕುಟುಂಬ ಮತ್ತು ಆರೋಗ್ಯ ಸಮೀಕ್ಷೆ (NFHS)ಗಳ ಮೂರು ಸುತ್ತುಗಳ ದತ್ತಾಂಶವನ್ನು ಮತ್ತು ಶಿಕ್ಷಣಕ್ಕೆ ಸಂಬಂಧಿಸಿದ ಸೂಚಕಗಳಿಗಾಗಿ ರಾಷ್ಟ್ರೀಯ ಮಾದರಿ ಸಮೀಕ್ಷೆಗಳ (NSS) ದತ್ತಾಂಶವನ್ನು ಬಳಸಲಾಯಿತು.

ಜೊತೆಗೆ, ಈ ಪ್ರಬಂಧಕ್ಕಾಗಿ, ಪ್ರತಿರಕ್ಷಣೆ ಸೂಚಕದ ಬದಲಾಗಿ ಕಡಮೆ ತೂಕವನ್ನು ಹೊಂದಿಲ್ಲದ ಮಕ್ಕಳ ಸೂಚಕಗಳು ಮತ್ತು ಕುಂಠಿತ ಬೆಳವಣಿಗೆ ಹೊಂದಿಲ್ಲದ ಮಕ್ಕಳ ಶೇಕಡಾವಾರು (NFHS III 2005-06 ರಿಂದ ದತ್ತಾಂಶವನ್ನು ಬಳಸಲಾಗಿದೆ) ಸೂಚಕಗಳನ್ನು ಬಳಸದೆ ಅಪೌಷ್ಠಿಕತೆಗೆ ಸಂಬಂಧಿಸಿದ ಸೂಚಕಗಳನ್ನು (ಆರು ವರ್ಷಗಳಿಗಿಂತ ಕೆಳಗಿನ ಮಕ್ಕಳ ಶೇಕಡಾ) ಬಳಸಲಾಯಿತು. ಇದು ರಾಜ್ಯಗಳ ಸ್ಥಿತಿಗತಿಯನ್ನು ಬದಲಾಯಿಸುತ್ತದೆಯೇ ಎನ್ನುವ ಮೌಲ್ಯಮಾಪನ ನಡೆಸುವುದಕ್ಕಾಗಿ, ಬದಲಿ ಸೂಚಕಗಳನ್ನು ಬಳಸಿ ಮತ್ತಷ್ಟು ವಿಶ್ಲೇಷಣೆಯನ್ನು ನಡೆಸಲಾಯಿತು. ಚಿತ್ರ 1, ಹಿಂದಿನ ಸೂಚಕಗಳನ್ನು ಬಳಸಿ ರಾಜ್ಯಗಳ CDI ಸ್ಥಿತಿಗತಿಯನ್ನು ತೋರಿಸಿದರೆ, ಚಿತ್ರ 2, ಸೂಚಕಗಳ ಎರಡೂ ಗಣಗಳನ್ನು ಬಳಸಿ ಸ್ಥಿತಿಗತಿ / ಚಿತ್ರಣದಲ್ಲಿ ಉಂಟಾಗಿರುವ ತುಲನಾತ್ಮಕ ಬದಲಾವಣೆಯನ್ನು ತೋರಿಸುತ್ತದೆ.

**ಮೂಲ: ವಿಶ್ವ ಬ್ಯಾಂಕ್, 2004**

## ರೇಖಾಚೌಕ 3.2
## ECE ಕಾರ್ಯಕ್ರಮಗಳಲ್ಲಿ ಮಕ್ಕಳ ಪಾಲ್ಗೊಳ್ಳುವಿಕೆಯನ್ನು ನಿರ್ಧರಿಸುವ ಕೌಟುಂಬಿಕ ಅಂಶಗಳು

**ನಕಾಶೆ 3.1**

**ಶಿಕ್ಷಣ ಪಡೆಯುತ್ತಿರುವ 4-5 ವರ್ಷಗಳ ಮಕ್ಕಳ**

**ಅವಲೋಕಿಸಿದ ಮತ್ತು ನಿರೀಕ್ಷಿತ ಸಂಭವನೀಯತೆಗಳು**




***ಯಾವುದೇ ಶಿಕ್ಷಣವನ್ನು ಪಡೆಯುತ್ತಿರುವವರು**

***ECCE ಗೆ ಹಾಜರಾಗುತ್ತಿರುವವರು**

***ಖಾಸಗಿ ECCE ಗೆ ಹಾಜರಾಗುತ್ತಿರುವವರು**

**ಅವಲೋಕಿಸಿದ ಸಂಭವನೀಯತೆ**

**ನಿರೀಕ್ಷಿತ ಸಂಭವನೀಯತೆ**

ವಿಶೇಷವಾಗಿ ಈ ಪ್ರಬಂಧಕ್ಕಾಗಿ ನಡೆಸಲಾದ ದ್ವಿಚರ ಋಜುತ್ವದ ಸಮಾಶ್ರಯಣ ವಿಶ್ಲೇಷಣೆಯು (bivariate probity regression analysis) ECCE ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಿಕೆಯ ಸಂಭವನೀಯತೆಯ ಮೇಲೆ ಪ್ರಭಾವ ಬೀರುವ ಸಾಮಾಜಿಕ ಮತ್ತು ಆರ್ಥಿಕ ಅಂಶಗಳನ್ನು ಪರಿಗಣಿಸಿತು. ಈ ವಿಶ್ಲೇಷಣೆಯು, ಸಾಮಾಜಿಕ ಸಮಾನತೆಯ ದೃಷ್ಟಿಯಿಂದ ಈ ಕೆಳಗಿನ ಉಪಯುಕ್ತ ಒಳನೋಟಗಳನ್ನು ನೀಡುತ್ತದೆ.

**ಸಾಮಾಜಿಕ ಪಂಗಡಗಳು:** ಸಾಪೇಕ್ಷವಾಗಿ ಸಾಮಾಜಿಕವಾಗಿ ವಂಚಿತ ಇತರ ಸಮುದಾಯಗಳಿಗೆ ಹೋಲಿಸಿದರೆ, ಪರಿಶಿಷ್ಟ ಪಂಗಡಗಳಿಗೆ ಸೇರಿದ ಮಕ್ಕಳು, ECCE ಕಾರ್ಯಕ್ರಮ ಸೇರಿದಂತೆ ಯಾವುದೇ ಶೈಕ್ಷಣಿಕ ಕಾರ್ಯಕ್ರಮಕ್ಕೆ ಹಾಜರಾಗುವ ವಿಚಾರದಲ್ಲಿ ಕನಿಷ್ಠ ಸಂಭವನೀಯತೆಯನ್ನು ತೋರುತ್ತಾರೆ. ಇದಕ್ಕೆ ಸೀಮಿತ ಅವಕಾಶ ಲಭ್ಯತೆ ಕಾರಣ ಎಂದು ಹೇಳಬಹುದು, ಏಕೆಂದರೆ ಹೆಚ್ಚಿನ ಸಂದರ್ಭಗಳಲ್ಲಿ, ಬುಡಕಟ್ಟು ಸಮುದಾಯಗಳು ನಿರ್ದಿಷ್ಟ ಭೌಗೋಳಿಕ ಪ್ರದೇಶಗಳಲ್ಲಿ ಕೇಂದ್ರೀಕೃತಗೊಂಡಿರುತ್ತಾರೆ (ಅವರು ಆ ಪ್ರದೇಶದೊಳಗೆ ವಿಸ್ತೃತವಾಗಿ ಹರಡಿಕೊಂಡಿದ್ದರೂ ಸಹ). ಸಾಮಾಜಿಕವಾಗಿ ವಂಚಿತ ಪಂಗಡಗಳಲ್ಲಿ, OBC ಗಳು ಶಿಕ್ಷಣದಲ್ಲಿ ಪಾಲ್ಗೊಳ್ಳುವ ಗರಿಷ್ಠ ಸಂಭವನೀಯತೆ ಇದ್ದರೂ, 'ಸಾಮಾನ್ಯ' ವರ್ಗದವರಲ್ಲಿ (ಖಾಸಗಿ ಶಿಕ್ಷಣದಲ್ಲಿ ಪಾಲ್ಗೊಳ್ಳುವುದನ್ನೂ ಒಳಗೊಂಡು) ಒಟ್ಟಾರೆ ಅತ್ಯಧಿಕ ಸಂಭವನೀಯತೆ ಇರುವುದು ಕಂಡು ಬಂದಿತು. ಆದಾಗ್ಯೂ, ಈ

**ನಕಾಶೆ 3.2**

**ST ಗೆ ಹೋಲಿಸಿದರೆ ಶಿಕ್ಷಣ ಪಡೆಯುತ್ತಿರುವ SC, OBC ಮತ್ತು ಸಾಮಾನ್ಯ ಪಂಗಡಗಳ ಮಕ್ಕಳ (3-6 ವರ್ಷಗಳ ವಯಸ್ಸು) ಸಾಪೇಕ್ಷ ಸಂಭವನೀಯತೆ**




***ಯಾವುದೇ ಶಿಕ್ಷಣವನ್ನು ಪಡೆಯುತ್ತಿರುವವರು**
***ECCE ಗೆ ಹಾಜರಾಗುತ್ತಿರುವವರು**
***ಖಾಸಗಿ ECCE ಗೆ ಹಾಜರಾಗುತ್ತಿರುವವರು**

**SC** **OBC**

**ಸಾಮಾನ್ಯ ಸಮುದಾಯ ವರ್ಗ**

**ಸ್ಥಳ ಸಂಬಂಧಿ ಭಿನ್ನತೆಗಳು**: ಈ ವಿಶ್ಲೇಷಣೆಯು, ನಗರಗಳ ಮಕ್ಕಳಿಗೆ ಹೋಲಿಸಿದರೆ ಗ್ರಾಮೀಣ ಪ್ರದೇಶಗಳ ಮಕ್ಕಳಲ್ಲಿ ಪಾಲ್ಗೊಳ್ಳುವಿಕೆಯ ಸಂಭವನೀಯತೆಯು ಕಡಮೆ ಇರುವುದನ್ನು ಸೂಚಿಸಿತು. ಮುಖ್ಯವಾಗಿ ಖಾಸಗಿ ಕ್ಷೇತ್ರದಲ್ಲಿ ಯಾವುದೇ ಶಾಲಾಪೂರ್ವದ ಕಾರ್ಯಕ್ರಮಕ್ಕೆ ಹಾಜರಾಗುವ ವಿಚಾರದಲ್ಲಿ ಈ ಭಿನ್ನತೆಯು ಸ್ಪಷ್ಟವಾಗಿ ಗೋಚರಿಸುತ್ತಿತ್ತು. ಸಾಮಾನ್ಯವಾಗಿ ಗ್ರಾಮೀಣ ಪ್ರದೇಶಗಳ ಮಕ್ಕಳು ECCE ಕಾರ್ಯಕ್ರಮಗಳಿಗೆ ಹಾಜರಾಗುವ ಸಾಧ್ಯತೆ ಕಡಮೆ; ಒಂದು ವೇಳೆ ಅವರು ಹಾಜರಾದರೂ, ಯಾವುದೇ ಖಾಸಗಿ ಶಾಲಾಪೂರ್ವದ ಶಾಲೆಗೆ ಹಾಜರಾಗುವ ತೀರಾ ಕಡಮೆ ಸಾಧ್ಯತೆಯಿದ್ದು ಅವರು ಅಂಗನವಾಡಿ (AW) ಕಾರ್ಯಕ್ರಮಕ್ಕಷ್ಟೇ ಹಾಜರಾಗುತ್ತಾರೆ.

**ನಕಾಶೆ 3.3**

**ನಗರ ಪ್ರದೇಶ ಮಕ್ಕಳಿಗೆ ಹೋಲಿಸಿದರೆ ಶಿಕ್ಷಣ ಪಡೆಯುತ್ತಿರುವ ಗ್ರಾಮೀಣ ಮಕ್ಕಳ (3-6 ವರ್ಷಗಳ ವಯಸ್ಸು) ಸಾಪೇಕ್ಷ ಸಂಭವನೀಯತೆಗಳು**




*ಯಾವುದೇ ಶಿಕ್ಷಣವನ್ನು ಪಡೆಯುತ್ತಿರುವವರು

*ECCE ಗೆ ಹಾಜರಾಗುತ್ತಿರುವವರು

*ಖಾಸಗಿ ECCE ಗೆ ಹಾಜರಾಗುತ್ತಿರುವವರು

**ಪೋಷಕರ ಶಿಕ್ಷಣ:** ಈ ವಿಶ್ಲೇಷಣೆಯು, ಸ್ಥಳ ಮತ್ತು ಸಾಮಾಜಿಕ - ಆರ್ಥಿಕ ಹಿನ್ನೆಲೆಗಾಗಿ ನಿಯಂತ್ರಿಸಿದ ನಂತರವೂ, ಕುಟುಂಬದ ಮುಖ್ಯಸ್ಥನ ಶಿಕ್ಷಣದ ಮಟ್ಟವು, ಶೈಕ್ಷಣಿಕ ಕಾರ್ಯಕ್ರಮವೊಂದಕ್ಕೆ ಮಕ್ಕಳು ಹಾಜರಾಗುವ ಸಂಭವನೀಯತೆಯು ಪ್ರಮುಖ ಮುನ್ಸೂಚಕವಾಗಿ ಇತ್ತು ಎಂಬುದನ್ನು ಸಹ ತೋರಿಸಿಕೊಟ್ಟಿತು. ಆಸಕ್ತಿದಾಯಕ ವಿಷಯವೇನೆಂದರೆ, ಕುಟುಂಬದ ಅನಕ್ಷರಸ್ಥ ಮುಖ್ಯಸ್ಥನಿಗೆ ಹೋಲಿಸಿದರೆ, ಕುಟುಂಬದ ಮುಖ್ಯಸ್ಥನ ಕನಿಷ್ಠ ಪ್ರಾಥಮಿಕ ಶಿಕ್ಷಣದ ವಿದ್ಯಾರ್ಹತೆಯು, ಮಕ್ಕಳನ್ನು ಶಾಲೆಗೆ ಕಳುಹಿಸುವ ಸಾಧ್ಯತೆಯಲ್ಲಿ ಶೇಕಡಾ 7 ರಷ್ಟು ಹೆಚ್ಚು ಸಂಭವನೀಯತೆ ಹಾಗೂ ಅವರನ್ನು ECCE ಕೇಂದ್ರಕ್ಕೆ ಕಳುಹಿಸುವ ಸಾಧ್ಯತೆಯಲ್ಲಿ ಶೇಕಡಾ 4 ರಷ್ಟು ಹೆಚ್ಚು ಸಂಭವನೀಯತೆ ಕಾಣಿಸಿಕೊಂಡಿತು. ಉನ್ನತ ವಿದ್ಯಾರ್ಹತೆ ಹೊಂದಿರುವ ಕುಟುಂಬಗಳ ಮುಖ್ಯಸ್ಥರಿಗೆ ಅನುರೂಪವಾಗಿ ಶಾಲಾಪೂರ್ವದ ಶಿಕ್ಷಣದಲ್ಲಿ ಪಾಲ್ಗೊಳ್ಳುವ ಸಂಭಾವ್ಯತೆಯು ಅಧಿಕ ಮಟ್ಟದಲ್ಲಿ ಇರುವುದು ಕಂಡುಬಂತು. ಶಿಕ್ಷಣದ ಪ್ರತಿ ಉನ್ನತ

ನಕಾಶೆ 3.4

ಅನಕ್ಷರಸ್ಥ ಪೋಷಕರಿಗೆ ಹೋಲಿಸಿ ಶಿಕ್ಷಣ ಪಡೆಯುತ್ತಿರುವ ಮಕ್ಕಳ (3-6 ವರ್ಷಗಳ ವಯಸ್ಸು) ಸಾಪೇಕ್ಷ ಸಂಭವನೀಯತೆ




**ಕುಟುಂಬದ ಆರ್ಥಿಕ ಸ್ಥಿತಿಗತಿ**: ಕುಟುಂಬದ ಆರ್ಥಿಕ ಸ್ಥಿತಿಗತಿಯಲ್ಲಿ ಸುಧಾರಣೆಯಾದಂತೆ (ಮಾಸಿಕ ತಲಾ ಉಪಭೋಗದ ವೆಚ್ಚದ (Monthly Per Capita Consumption Expenditure (MPCE)) ಚತುರ್ಥಗಳ ಮೂಲಕ ನಿಗದಿಪಡಿಸಲಾಗುತ್ತದೆ) ಶಿಕ್ಷಣದಲ್ಲಿ ಪಾಲ್ಗೊಳ್ಳುವ, ಹೆಚ್ಚು ಮುಖ್ಯವಾಗಿ ಶಾಲಾಪೂರ್ವ ಶಿಕ್ಷಣದಲ್ಲಿ ಪಾಲ್ಗೊಳ್ಳುವ ಸಾಧ್ಯತೆಯಲ್ಲಿಯೂ ಹೆಚ್ಚಳವಾಗಿರುವುದು ಕಂಡು ಬಂತು. MPCE Q4 (ಅತ್ಯಧಿಕ SES) ವರ್ಗದ ಮಕ್ಕಳು ಖಾಸಗಿ ವಲಯದ ಶಾಲಾಪೂರ್ವದ ಕಾರ್ಯಕ್ರಮಕ್ಕೆ

**ನಕಾಶೆ 3.5**

ತೀರಾ ಕೆಳಗಿನ ಮಟ್ಟದ ಆರ್ಥಿಕ ಗುಂಪುಗಳಿಗೆ ಹೋಲಿಸಿದರೆ **ಶಿಕ್ಷಣ ಪಡೆಯುತ್ತಿರುವ ಐದನೇ ಒಂದು ಭಾಗದ ಹೆಚ್ಚಿನ ಆದಾಯ ಗುಂಪುಗಳಿಗೆ ಸೇರಿದ ಮಕ್ಕಳ (3-6 ವರ್ಷಗಳ ವಯಸ್ಸು) ಸಾಪೇಕ್ಷ ಸಂಭವನೀಯತೆ**




* **ಸಾಪೇಕ್ಷ ಸಂಭವನೀಯತೆ**

***ಯಾವುದೇ ಶಿಕ್ಷಣವನ್ನು ಪಡೆಯುತ್ತಿರುವವರು**

***ECCE ಗೆ ಹಾಜರಾಗುತ್ತಿರುವವರು**

***ಖಾಸಗಿ ECCE ಗೆ ಹಾಜರಾಗುತ್ತಿರುವವರು**

**MPCE Q2**

**MPCE Q3** **MPCE Q4**

**ಹಿಂದುಳಿದಿರುವ ರಾಜ್ಯಗಳು**: ಹಿಂದುಳಿದಿರುವ ರಾಜ್ಯಗಳ ಮಕ್ಕಳು (ಬಿಹಾರ, ಉತ್ತರ ಪ್ರದೇಶ, ಜಾರ್ಖಂಡ್, ಛತ್ತೀಸ್ ಗಢ, ಮಧ್ಯ ಪ್ರದೇಶ, ಒಡಿಶಾ ಮತ್ತು ರಾಜಸ್ಥಾನ) ಶೈಕ್ಷಣಿಕ ಕಾರ್ಯಕ್ರಮಗಳಲ್ಲಿ, ಮುಖ್ಯವಾಗಿ ಶಾಲಾಪೂರ್ವದ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳಲು ತೋರುವ ಒಲವು ತುಂಬಾ ಕಡಮೆ. ಆದಾಗ್ಯೂ, ಯಾವುದೇ ಶೈಕ್ಷಣಿಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವ ಸಾಧ್ಯತೆಯು ತೀರಾ ಕಡಮೆ ಇರುವ ಈಶಾನ್ಯ ರಾಜ್ಯಗಳಲ್ಲಿ, ಹೆಚ್ಚು ವಿಸ್ತೃತ ಶಾಲಾಪೂರ್ವ ಶಿಕ್ಷಣದ ಮುನ್ನೇರ್ಪಾಡಿನ ಕಾರಣ, ಶಾಲಾಪೂರ್ವ ಕಾರ್ಯಕ್ರಮಕ್ಕೆ ಹಾಜರಾಗುವ ಸಂಭವನೀಯತೆಯನ್ನು ಹಿಂದುಳಿಯದ ರಾಜ್ಯಗಳೊಂದಿಗೆ ಹೋಲಿಸಬಹುದು. ನಕಾಶೆಯಲ್ಲಿ ತೋರಿಸಲಾಗಿರುವ ಪ್ರೊಬಿಟ್ ಅಂದಾಜು ಗುಣಾಂಕಗಳನ್ನು (ಸಾಪೇಕ್ಷ ಬದಲಾವಣೆಯನ್ನು ತೋರಿಸುತ್ತಿರುವ dF/dx)

**ನಕಾಶೆ 3.6**

**ಇತರ ರಾಜ್ಯಗಳಿಗೆ ಹೋಲಿಸಿದರೆ ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ರಾಜ್ಯಗಳು ಮತ್ತು ಈಶಾನ್ಯ ರಾಜ್ಯಗಳ ಶಿಕ್ಷಣ ಪಡೆಯುತ್ತಿರುವ ಮಕ್ಕಳ (3-6 ವರ್ಷಗಳ ವಯಸ್ಸು) ಸಾಪೇಕ್ಷ ಸಂಭವನೀಯತೆಗಳು**




*ಯಾವುದೇ ಶಿಕ್ಷಣವನ್ನು ಪಡೆಯುತ್ತಿರುವವರು

*ECCE ಗೆ ಹಾಜರಾಗುತ್ತಿರುವವರು

*ಖಾಸಗಿ ECCE ಗೆ ಹಾಜರಾಗುತ್ತಿರುವವರು

ಹಿಂದುಳಿದ ಈಶಾನ್ಯ

ರೇಖಾಚೌಕ 3.2, ECCE ಗೆ ಸಂಬಂಧಿಸಿದಂತೆ ಇರುವ ಸಮಾನತೆಯ ಸಮಸ್ಯೆಗಳನ್ನು ದೃಢೀಕರಿಸುವ ಸಾಕ್ಷ್ಯವನ್ನು ಒದಗಿಸುತ್ತದೆ. ಏಕೆಂದರೆ, ಈ ಸಮುದಾಯಗಳಿಗೆ ಪ್ರಮುಖ ಅಗತ್ಯತೆ ಹಾಗೂ ಆದ್ಯತೆ ಎನಿಸಿರುವ ECCE ಯಲ್ಲಿ ಮಕ್ಕಳ ಪಾಲ್ಗೊಳ್ಳುವಿಕೆಯ ಮೇಲೆ ಸಾಮಾಜಿಕ ಮತ್ತು ಆರ್ಥಿಕ ಅಂಶಗಳು ಬೀರುವ ಪರಿಣಾಮವನ್ನು ತೋರಿಸುತ್ತದೆ.

ಜಗತ್ತಿನಾದ್ಯಂತ ನಡೆದಿರುವ ಸಂಶೋಧನೆಗಳ ಪ್ರಕಾರ, ಉತ್ತಮ ಗುಣಮಟ್ಟದ ECCE ಕಾರ್ಯಕ್ರಮಗಳು ಮಕ್ಕಳ ಬೆಳವಣಿಗೆಯಲ್ಲಿ ಅಲ್ಪಕಾಲೀನ ಮತ್ತು ದೀರ್ಘಕಾಲೀನ ಲಾಭವನ್ನು ನೀಡುತ್ತವೆ ಎಂಬುದು ಸಾಬೀತಾಗಿದೆ. ಮುಖ್ಯವಾಗಿ ಬಡತನದ ಸನ್ನಿವೇಶದಲ್ಲಿ ಇದು ನಿಜವೆನಿಸಿದೆ. ಏಕೆಂದರೆ ಮಕ್ಕಳು ಮನೆಯಲ್ಲಿ ಅನುಭವಿಸುವ ಅಭಾವವನ್ನು ಇದು ಸರಿದೂಗಿಸುತ್ತದೆ. ಚೆನ್ನಾಗಿ ಜಾರಿಗೊಳಿಸಿದರೆ, ECCE ಕಾರ್ಯಕ್ರಮಗಳು ಮಕ್ಕಳಿಗೆ ಭರವಸೆಯಿಂದ ಕೂಡಿದ ಪ್ರಾರಂಭಾನುಕೂಲವನ್ನು ನೀಡಬಲ್ಲವು ಹಾಗೂ ಸುಧಾರಿತ ಜೀವನ ಮಟ್ಟವನ್ನು ತಮ್ಮದಾಗಿಸುವ ಅವರ ಅವಕಾಶವನ್ನು ಹೆಚ್ಚಿಸಬಲ್ಲವು. ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ನಡೆದ, ಚೆನ್ನಾಗಿ ವಿನ್ಯಾಸಗೊಳಿಸಿದ ಕೆಲವೊಂದು ಅನುಲಂಬ

ಅಧ್ಯಯನಗಳ ಪ್ರಕಾರ, ECCE ಕಾರ್ಯಕ್ರಮಗಳು ವಿಶೇಷವಾಗಿ ಮಕ್ಕಳ ಆರೋಗ್ಯ, ಸಂಜ್ಞಾನಾತ್ಮಕ ಸಾಮರ್ಥ್ಯ, ಶೈಕ್ಷಣಿಕ ಸಾಧನೆ ಮತ್ತು ಶಾಲೆಯಲ್ಲಿ ಉಳಿಯುವುದು ಇತ್ಯಾದಿಗಳ ಸುಧಾರಣೆಗೆ ಕೊಡುಗೆ ನೀಡುತ್ತವೆ. ಇವು '*ಅಲ್ಪಕಾಲೀನ*' ಪ್ರಯೋಜನಗಳಾದರೆ, "ಅಧಿಕ ಆದಾಯ, ಮನೆ ಖರೀದಿಸುವ ಅಧಿಕ ಸಾಧ್ಯತೆ, ಕಲ್ಯಾಣ ಯೋಜನೆಗಳಿಗೆ ಅವಲಂಬಿಸುವ ಕಡಮೆ ಸಂಭಾವ್ಯತೆ ಮತ್ತು ಜೈಲುವಾಸ ಹಾಗೂ ಬಂಧನದ ಕಡಮೆ ದರ" ದ ಮೂಲಕ ದೀರ್ಘಕಾಲೀನ ಪ್ರಯೋಜನಗಳೂ ದಾಖಲಾಗಿವೆ. (ವಿಶ್ವ ಬ್ಯಾಂಕ್, 2005 b:133).

ಭಾರತೀಯ ಸನ್ನಿವೇಶದಲ್ಲಿಯೂ, ECCE ಯು ಪ್ರಾಥಮಿಕ ಶಿಕ್ಷಣದ (ಸಹಸ್ರಮಾನದ ಅಭಿವೃದ್ಧಿ ಮತ್ತು ಎಲ್ಲರಿಗೂ ಶಿಕ್ಷಣದ ಗುರಿ – ಇವೆರಡಕ್ಕೂ ಭಾರತವು ಸಹಿ ಹಾಕಿದ್ದು, ಇದರಲ್ಲಿ ಪ್ರಾಥಮಿಕ ಶಿಕ್ಷಣದ ಗುರಿಯು ಅಡಕವಾಗಿದೆ) ಯಶಸ್ವಿ ಪೂರ್ಣಗೊಳಿಸುವಿಕೆಗೆ ತನ್ನ ಕೊಡುಗೆಯನ್ನು ನೀಡುತ್ತದೆ ಎನ್ನುವುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳಿವೆ. ಈ ಕೊಡುಗೆಯನ್ನು ಔಪಚಾರಿಕ ಶಿಕ್ಷಣಕ್ಕಾಗಿ ಮಕ್ಕಳ ಶೈಕ್ಷಣಿಕ ಮತ್ತು ಸಾಮಾಜಿಕ ಸಿದ್ಧತೆಯ ವಿಚಾರಗಳಲ್ಲಿ ದಾಖಲೀಕರಿಸಲಾಗಿದೆ. ಎಂಟು ರಾಜ್ಯಗಳಲ್ಲಿ 31,483 ಮಕ್ಕಳ ನಾಲ್ಕು ಸಮೂಹಗಳ ಕುರಿತು ನಡೆಸಿದ ಅನುಲಂಬನ ಅಧ್ಯಯನವು, ECE ಅನುಭವ ಹೊಂದಿರುವ ಮಕ್ಕಳು ಪ್ರಾಥಮಿಕ ಶಾಲೆಯನ್ನು ಮುಂದುವರಿಸುವ ಹಾಗೂ ಶಾಲೆಯನ್ನು ಬಿಡದಿರುವ ಸಂಭಾವ್ಯತೆಯು 15-20 ಶೇಕಡಾದಷ್ಟು ಹೆಚ್ಚು ಇದೆ ಎಂಬುದನ್ನು ತೋರಿಸಿದೆ (NCERT, 1993). ಆಸಕ್ತಿಯ ವಿಷಯವೆಂದರೆ, ಪ್ರಾಥಮಿಕ ತರಗತಿಗಳಲ್ಲಿ ಮಕ್ಕಳನ್ನು ಉಳಿಸಿಕೊಳ್ಳುವುದಕ್ಕೆ ಸಂಬಂಧಿಸಿದಂತೆ ECE ಯ ಅನುಭವದ ಪರಿಣಾಮವು, ಹುಡುಗರಿಗೆ ಹೋಲಿಸಿದರೆ ಹುಡುಗಿಯರಿಗೆ ಹೆಚ್ಚಿನ ಪ್ರಮಾಣದಲ್ಲಿದೆ. ಇಪ್ಪತ್ತೈದು ರಾಜ್ಯಗಳು ಮತ್ತು ಒಂದು ಕೇಂದ್ರಾಡಳಿತ ಪ್ರದೇಶದ 98 ಜಿಲ್ಲೆಗಳನ್ನು ಒಳಗೊಂಡು ನಡೆಸಲಾದ ರಾಷ್ಟ್ರೀಯ ಮಟ್ಟದ ICDS ಮೌಲ್ಯಮಾಪನವು, ECE ಅನುಭವ ಇಲ್ಲದ ಮಕ್ಕಳ ಕೇವಲ 67.7 ಶೇಕಡಾಕ್ಕೆ ಹೋಲಿಸಿದರೆ, ECE ಅನುಭವ ಇರುವ ಮಕ್ಕಳಲ್ಲಿ ಪ್ರಾಥಮಿಕ ಹಂತದಲ್ಲಿ ಉಳಿಸಿಕೊಳ್ಳುವಿಕೆ ದರವು 89 ಶೇಕಡಾ ಆಗಿತ್ತು ಎಂಬುದಾಗಿ ಸಾಬೀತುಪಡಿಸಿದೆ (NIPCCD, 1992). ECCE ಯು ಆರಂಭಿಕ ಪ್ರಾಥಮಿಕ ತರಗತಿಗಳಲ್ಲಿ ಮಕ್ಕಳು ಮಾಡುವ ಸಾಧನೆಯ ಮಟ್ಟಗಳ ಮೇಲೆ ಗಮನಾರ್ಹ ಪ್ರಭಾವವನ್ನು ಬೀರಿತ್ತು. ಹಿಂದುಳಿದ ಒಂಬತ್ತು ರಾಜ್ಯಗಳಲ್ಲಿ ECE ಯೋಜನೆಯ ಕುರಿತು ನಡೆಸಿದ ಇನ್ನೊಂದು ಮೌಲ್ಯಮಾಪನದಲ್ಲಿ, ECE ಅಡಿಯಲ್ಲಿ ಸಿದ್ಧಗೊಂಡ ಮಕ್ಕಳು ಬರವಣಿಗೆಯ ಸಿದ್ಧತೆ, ಧ್ವನಿಮಾದಲ್ಲಿ ವ್ಯತ್ಯಾಸ ಗುರುತಿಸುವ ಸಾಮರ್ಥ್ಯ, ವಸ್ತುಗಳನ್ನು ಜೋಡಿಸುವುದು, ವರ್ಗೀಕರಣ ಇತ್ಯಾದಿ ಶಾಲಾ ಸಿದ್ಧತೆ ಮಾನದಂಡಗಳಲ್ಲಿ ಉತ್ತಮ ಅಂಕ ಗಳಿಸಿದರು (UNESCO, 2006). ಉತ್ತಮ ಗುಣಮಟ್ಟದ ECE ಸಂಖ್ಯಾ ಸಿದ್ಧತೆ ಪಠ್ಯಕ್ರಮವು, ಇಡೀ ಪ್ರಾಥಮಿಕ ಹಂತಗಳಲ್ಲಿ, ನಂತರದ ಕಲಿಕೆ ಮತ್ತು ಗಣಿತದಲ್ಲಿನ ಪರಿಕಲ್ಪನೆಗಳ ಸ್ಪಷ್ಟತೆಗಳ ಮೇಲೆ ಗಣನೀಯ ಮತ್ತು ಸುಸ್ಥಿರ ಪರಿಣಾಮ ಹೊಂದಿರುವುದನ್ನು ಸೂಕ್ಷ್ಮ ಮಟ್ಟದ ಅನುಲಂಬನ ಅಧ್ಯಯನವು ತೋರಿಸಿತು (Kaul (ಕೌಲ್), 1998). ICDS ಮತ್ತು ರಾಷ್ಟ್ರೀಯ ಬಾಲವಾಡಿ ಅನುದಾನ ಮತ್ತು ಮಕ್ಕಳಿಗಾಗಿ ಬಾಲವಾಡಿ ಸೇವೆಗಳ (NCAER, 2001; NIPCCD, 2004, 1995; NCERT, 2003) ಮೌಲ್ಯಮಾಪನ ನಡೆಸುವುದಕ್ಕಾಗಿ ದೇಶದಾದ್ಯಂತ ನಡೆಸಿದ ಸ್ಥೂಲ ಮಟ್ಟದ ಇತರ ಕೆಲವು ನಿಯೋಜಿಸಲಾದ ಅಧ್ಯಯನಗಳ ಆವಿಷ್ಕಾರಗಳು, ಆಸಕ್ತಿಕರ ಅಂಶವನ್ನು ಹೊರಗೆಡಹಿವೆ. ಇವುಗಳ ಪ್ರಕಾರ, ವಿವಿಧ ECCE ಕಾರ್ಯಕ್ರಮಗಳು, ಸಂಬಂಧಿತ ಎಲ್ಲಾ ಪಾಲುದಾರರು ಗ್ರಹಿಸಿದಂತೆ, ಸ್ವತಃ ಎಳೆಯ ಮಕ್ಕಳಿಗೆ ಪ್ರಯೋಜನಕಾರಿಯಾಗಿರುವುದು ಮಾತ್ರವಲ್ಲದೆ,

ಅವರ ಹಿರಿಯ ಒಡಹುಟ್ಟಿದವರಿಗೂ (ಮುಖ್ಯವಾಗಿ ಒಡಹುಟ್ಟಿದವರ ಆರೈಕೆಯ ಜವಾಬ್ದಾರಿಯಿಂದ ಮುಕ್ತರಾದ ಹುಡುಗಿಯರಿಗೆ) ಲಾಭದಾಯಕ ಎನಿಸಿವೆ ಹಾಗೂ ಸಮಯ ಮತ್ತು ಸ್ಥಳದ ನಡುವೆ ಹೊಂದಾಣಿಕೆ ಉಂಟಾದಲ್ಲಿ ಅವರು ಸಾಮಾನ್ಯ ಶಾಲೆಗಳನ್ನು ಸೇರುವಂತೆ ಮಾಡಿವೆ.

ಈ ಮಧ್ಯಮಕಾಲೀನ ಮತ್ತು ದೀರ್ಘಕಾಲೀನ ಪ್ರಯೋಜನಗಳೇ ECCE ಯನ್ನು ಉಪಯುಕ್ತ ಹೂಡಿಕೆಯನ್ನಾಗಿ ಮಾಡಿವೆ. ಅಮೆರಿಕದಲ್ಲಿ ನಡೆಸಿದ ಇತ್ತೀಚಿನ ಅಧ್ಯಯನವು, ಶಾಲೆಗೆ ಸೇರುವ ಮೊದಲ ಆರಂಭಿಕ ವರ್ಷಗಳಲ್ಲಿನ ಹೂಡಿಕೆಯು, ನಂತರದ ಹೂಡಿಕೆಗೆ ದೊರೆಯುವ ಲಾಭಕ್ಕಿಂತಲೂ ಹೆಚ್ಚಿನ ಲಾಭವನ್ನು ನೀಡುತ್ತದೆ ಎಂಬುದನ್ನು ಸಾಬೀತುಪಡಿಸಿದೆ (ವಿಶ್ವ ಬ್ಯಾಂಕ್, 2005b). ಬ್ರೆಜಿಲ್ ದೇಶದ PROAPE ಯೋಜನೆಯ ಪ್ರಕಾರ, ಪ್ರಾಥಮಿಕ ಶಿಕ್ಷಣದ ಎರಡನೇ ತರಗತಿಯವರೆಗೆ ವಿದ್ಯಾರ್ಥಿಗಳ ಆರಂಭಿಕ ಕಲಿಕಾ ಕಾರ್ಯಕ್ರಮವೂ ಸೇರಿದಂತೆ, ಶಾಲಾ ಶಿಕ್ಷಣಕ್ಕೆ ಉಂಟಾಗುವ ಒಟ್ಟು ವೆಚ್ಚವು, ECCE ಯಲ್ಲಿ ಪಾಲ್ಗೊಳ್ಳದೆ ಇದ್ದವರಿಗೆ ಹೋಲಿಸಿದರೆ, ECCE ಯಲ್ಲಿ ಪಾಲ್ಗೊಂಡವರ ಮೇಲಿನ ವೆಚ್ಚವು 11 ಶೇಕಡಾದಷ್ಟು ಕಡಮೆ ಇತ್ತು (UNESCO, 2002:38). ಇತ್ತೀಚಿನ ಅನುಲಂಬ ಅಧ್ಯಯನದ ಪ್ರಕಾರ, ECCE ಯಲ್ಲಿ ಹೂಡಿಕೆ ಮಾಡಿದ ಪ್ರತಿ ಡಾಲರ್ ಮೊತ್ತವು, ನಂತರದ ವರ್ಷದಲ್ಲಿ $12.90 ನಷ್ಟು ಉಳಿತಾಯವನ್ನು ಮಾಡುವ ಮೂಲಕ ಲಾಭವನ್ನು ತಂದು ಕೊಟ್ಟಿದೆ. ವಿಶ್ವ ಬ್ಯಾಂಕ್ ವರದಿ 2006 (2005b:133) – ಇದರಲ್ಲಿ ಈ ರೀತಿ ಉಲ್ಲೇಖಿಸಲಾಗಿದೆ: “ಅನನುಕೂಲತೆಯ ಪರಿಸರದಿಂದ ಬಂದಂತಹ ಮಕ್ಕಳ ಪರವಾಗಿ ಮಾಡಿದ ಆರಂಭಿಕಕಾರ್ಯಯೋಜನೆಗಳು ಫಲಕಾರಿತ್ವ – ಸಮಾನತೆಯನ್ನು ಸರಿದೂಗಿಸುವ ಮಟ್ಟವನ್ನು ವರ್ಧಿಸುವುದಿಲ್ಲ; ಬದಲಾಗಿ ಅವು ವ್ಯಕ್ತಿಗಳ, ಕಾರ್ಯಪಡೆಯ ಮತ್ತು ಒಟ್ಟಾರೆಯಾಗಿ ಸಮಾಜದ ಉತ್ಪಾದಕತೆಯನ್ನು ಹೆಚ್ಚಿಸುತ್ತವೆ, ಮತ್ತು ಹುಟ್ಟಿನ ಆಕಸ್ಮಿಕತೆಯ ಅಂಶವನ್ನು ಹೋಗಲಾಡಿಸಲು ಸಹಾಯ ಮಾಡಿ ಜೀವನ ಪರ್ಯಂತ ಅಸಮಾನತೆಯ ಪ್ರಮಾಣವನ್ನು ಕಡಮೆ ಮಾಡುತ್ತವೆ.”

# ಭಾರತದಲ್ಲಿ ಮಗುವಿಗೆ ಶಿಕ್ಷಣ ಒದಗಿಸುವುದು

ಭಾರತದಲ್ಲಿ ಮಗುವಿನ ಸ್ಥಿತಿಗತಿಯು ತೃಪ್ತಿಕರ ಮಟ್ಟದಿಂದ ದೂರವಿದ್ದರೂ, ದಕ್ಷಿಣ ಏಷ್ಯಾದ ಇತರ ದೇಶಗಳಿಗೆ ಹೋಲಿಸಿದರೆ ನಮ್ಮ ದೇಶದ ಮಕ್ಕಳಿಗಾಗಿ ಇರುವ ಸಾರ್ವಜನಿಕ ನೀತಿ ಮತ್ತು ಮುನ್ನೇರ್ಪಾಡುಗಳ ವಿಚಾರದಲ್ಲಿ ನಾವು ಸಾಪೇಕ್ಷವಾಗಿ ಉತ್ತಮ ಸಾಧನೆಯನ್ನೇ ಮಾಡಿದ್ದೇವೆ. ಆದರೂ, ಮಕ್ಕಳ ರಕ್ಷಣೆ, ಕಲ್ಯಾಣ ಮತ್ತು ಅಭಿವೃದ್ಧಿಗಾಗಿ ಅನೇಕ ವರ್ಷಗಳಿಂದ ಜಾರಿಗೆ ತಂದ ಸಾಂವಿಧಾನಿಕ ಮುನ್ನೇರ್ಪಾಡುಗಳು, ಶಾಸನಾತ್ಮಕ ಕ್ರಮಗಳು, ನೀತಿ ಚೌಕಟ್ಟುಗಳು ಮತ್ತು ಸಾರ್ವಜನಿಕ ಉಪಕ್ರಮಗಳಲ್ಲಿ ಕಾಣಿಸಿಕೊಂಡಂತೆ, ಭಾರತೀಯ ಸಾಮಾಜಿಕ - ರಾಜಕೀಯ ಸನ್ನಿವೇಶದಲ್ಲಿ ECCE/ ಮಗುವಿನ ಬೆಳವಣಿಗೆಯ ಪ್ರಾಮುಖ್ಯತೆಯನ್ನು ವಿಸ್ಪಷ್ಟವಾಗಿ ಅಂಗೀಕರಿಸಲಾಗಿದೆ.

## ಸಕ್ರಿಯಗೊಳಿಸುವ ನೀತಿ ಚೌಕಟ್ಟು

*ಸಾಂವಿಧಾನಿಕ ಮುನ್ನೇರ್ಪಡುಗಳು:*

ದೇಶದಲ್ಲಿ ECCE ಸೇವೆಗಳನ್ನು ಪ್ರೋತ್ಸಾಹಿಸುವುದಕ್ಕಾಗಿ, ಭಾರತದ ಸಂವಿಧಾನದಲ್ಲಿ ಮೂಲಭೂತ ಹಕ್ಕಿನ ರೂಪದಲ್ಲಿ ಅಥವಾ ರಾಜ್ಯ ನೀತಿಯ ನಿರ್ದೇಶಕ ತತ್ವವಾಗಿ, ಅನೇಕ ಮುನ್ನೇರ್ಪಾಡುಗಳನ್ನು ಮಾಡಲಾಗಿದೆ. ಮೂಲಭೂತ ಹಕ್ಕಿನ ರೂಪದಲ್ಲಿ, ಭಾರತೀಯ ಸಂವಿಧಾನದ ಅನುಚ್ಛೇದ 15(3), ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ದುರ್ಬಲರೆನಿಸಿರುವ ಪಂಗಡಗಳಿಗೆ ಅನುಕೂಲಕರವಾಗುವಂತೆ ಸಕಾರಾತ್ಮಕ ತಾರತಮ್ಯದ ಕ್ರಮಗಳನ್ನು ಅನುಷ್ಠಾನಗೊಳಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ. ಇದು ಹುಡುಗಿಯರು ಮತ್ತು ಅನನುಕೂಲತೆಗೆ ಈಡಾದ ಸಾಮಾಜಿಕ ಪಂಗಡಗಳ ಮಕ್ಕಳಿಗಾಗಿ ಮತ್ತು ಕಷ್ಟಕರ ಸನ್ನಿವೇಶಗಳಲ್ಲಿರುವ ಮಕ್ಕಳಿಗಾಗಿ ವಿಶೇಷ ಮುನ್ನೇರ್ಪಾಡುಗಳನ್ನು ಮಾಡಲು ಅವಕಾಶ ಒದಗಿಸುತ್ತದೆ. ಆರಂಭದಲ್ಲಿ, ಭಾರತವು ಗಣತಂತ್ರವಾದಾಗ, ‘ಹದಿನಾಲ್ಕು ವರ್ಷದ ವರೆಗಿನ ವಯಸ್ಸಿನ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ’ವನ್ನು ನೀಡಲು ಮುನ್ನೇರ್ಪಾಡು ಮಾಡುವುದಕ್ಕಾಗಿ ಭಾರತೀಯ ಸಂವಿಧಾನವು ಬದ್ಧವಾಗಿತ್ತು. ವಯಸ್ಸಿನ ಕೆಳ ಮಿತಿಯ ಅನುಪಸ್ಥಿತಿಯಲ್ಲಿ, ಆರಂಭಿಕ ಬಾಲ್ಯದ ಶಿಕ್ಷಣ ಸೇವೆಗಳನ್ನು ಸಹ ಸಾಂವಿಧಾನಿಕ ಬದ್ಧತೆಯ ಭಾಗವೆಂದು ಪರಿಗಣಿಸಲಾಗಿತ್ತು. ಆದಾಗ್ಯೂ, 2001ರಲ್ಲಿ ಮಾಡಲಾದ ಎಂಬತ್ತಾರನೇ ಸಾಂವಿಧಾನಿಕ ತಿದ್ದುಪಡಿಯು, 6-14 ವರ್ಷ ವಯಸ್ಸಿನ ನಡುವಿನ ಮಕ್ಕಳ ಪ್ರಾಥಮಿಕ ಶಿಕ್ಷಣವನ್ನು ಮೂಲಭೂತ ಹಕ್ಕಾಗಿ ಅಂಗೀಕರಿಸಿ, ECCE ಯನ್ನು ಈ ಬದ್ಧತೆಯಿಂದ ಹೊರಗಿಟ್ಟಿತು. ಇದಕ್ಕೆ ಅನೇಕ ವೃತ್ತಿಪರ ಸಂಸ್ಥೆಗಳು ಮತ್ತು ನಾಗರಿಕ ಸಮಾಜದಿಂದ ಸಾಕಷ್ಟು ಪ್ರತಿಭಟನೆ ವ್ಯಕ್ತವಾಯಿತು. ರಾಜಿ ಸೂತ್ರವಾಗಿ, ಈಗ ECCE ಯನ್ನು ಅನುಚ್ಛೇದ 45ರ ಮೂಲಕ ಸಾಂವಿಧಾನಿಕ ಮುನ್ನೇರ್ಪಾಡಿನಲ್ಲಿ ಸೇರಿಸಲಾಗಿದೆ. ಆದರೆ ಪ್ರತಿ ಮಗುವಿನ ನ್ಯಾಯಾಧೀನವಾದ ಹಕ್ಕಾಗಿ ಅಲ್ಲ. ಇದನ್ನು ಈ ರೀತಿ ಬರೆಯಲಾಗಿದೆ: ‘‘ಮಕ್ಕಳು ಆರು ವರ್ಷಗಳನ್ನು ಪೂರ್ಣಗೊಳಿಸುವ ತನಕ ಪ್ರಭುತ್ವವು ಎಲ್ಲಾ ಮಕ್ಕಳಿಗೆ ECCE ಒದಗಿಸಲು ಪ್ರಯತ್ನಿಸಬೇಕು’’ (ಭಾರತ ಸರ್ಕಾರ, 1949).

**ರೇಖಾಚೌಕ 4.1**

**ಭಾರತದಲ್ಲಿ ECCE ಮುನ್ನೇರ್ಪಾಡಿನ ಹಿನ್ನೆಲೆಯಲ್ಲಿ ರೂಪಿಸಲಾಗಿರುವ ಪ್ರಮುಖ ನೀತಿಗಳು**

- **ರಾಷ್ಟ್ರೀಯ ಪೌಷ್ಠಿಕಾಂಶ ನೀತಿಯು (1993)** ಆರು ವರ್ಷ ವಯಸ್ಸಿನ ಕೆಳಗಿನ ಮಕ್ಕಳನ್ನು, ಹೆಚ್ಚಿನ ಆದ್ಯತೆ ನೀಡಬೇಕಾದ, ಹೆಚ್ಚಿನ ಅಪಾಯ ಸಂಭವವಿರುವ ಪಂಗಡಗಳೆಂದು ಪರಿಗಣಿಸಿತು.
- **ಮಹಿಳಾ ಸಬಲೀಕರಣದ ಕುರಿತ ರಾಷ್ಟ್ರೀಯ ನೀತಿಯು (2001)** ಕಾರ್ಯಸ್ಥಳಗಳಲ್ಲಿ ಬಾಲವಾಡಿಗಳು ಸೇರಿದಂತೆ ಮಗು ಆರೈಕೆ ಸೌಲಭ್ಯಗಳನ್ನು ಒದಗಿಸುವುದನ್ನು ಬೆಂಬಲಿಸಿತು.
- ಭಾರತವು **1992ರಲ್ಲಿ ಮಕ್ಕಳ ಹಕ್ಕುಗಳ ಒಪ್ಪಂದ**ವನ್ನು ಅನುಮೋದಿಸಿತು ಹಾಗೂ ಮಕ್ಕಳ ಕುರಿತ ತನ್ನ ಬದ್ಧತೆಯನ್ನು ಪುನರ್ದೃಢೀಕರಿಸಿತು. ಇದರ ಪರಿಣಾಮವಾಗಿ ಮಕ್ಕಳಿಗಾಗಿ ರಾಷ್ಟ್ರೀಯ ಶಾಸನಪತ್ರವನ್ನು ಸಿದ್ಧಪಡಿಸುವುದಕ್ಕಾಗಿ ನೀತಿ ಚೌಕಟ್ಟನ್ನು ಸೂತ್ರೀಕರಿಸಲಾಯಿತು. *'ಮಕ್ಕಳ ರಾಷ್ಟ್ರೀಯ ಆಯೋಗ'* ವನ್ನು ಸಹ ಸ್ಥಾಪಿಸಲಾಯಿತು. ಪರಿಕಲ್ಪಿಸಿಕೊಂಡಂತೆ, ಈ ಆಯೋಗವು, ಪರಿಣಾಮಕಾರಿಯ ಕಾನೂನಿನ ಬೆಂಬಲದೊಂದಿಗೆ ಮಕ್ಕಳ ಹಕ್ಕುಗಳನ್ನು ರಕ್ಷಿಸುವ/ ಕಾಪಾಡುವ ಜವಾಬ್ದಾರಿಯನ್ನು ಹೊಂದಿದೆ.
- **ಮಕ್ಕಳಿಗಾಗಿ ರಾಷ್ಟ್ರೀಯ ಕ್ರಿಯಾ ಯೋಜನೆಯು (2005)** ECCE ಯ ಸಾರ್ವತ್ರೀಕರಣವನ್ನು ತನ್ನ ಗುರಿಗಳಲ್ಲಿ ಒಂದನ್ನಾಗಿ ಸೇರಿಸಿಕೊಂಡಿತು. ಇದು 3 ವರ್ಷಗಳ ವಯಸ್ಸಿನ ಕೆಳಗಿನ ಮಕ್ಕಳ ಆರೈಕೆ, ರಕ್ಷಣೆ ಮತ್ತು ಅಭಿವೃದ್ಧಿಗೆ ಅವಕಾಶಗಳು ಹಾಗೂ 3-6 ವರ್ಷ ವಯಸ್ಸಿನ ಮಕ್ಕಳಿಗಾಗಿ ಸಮಗ್ರ ಆರೈಕೆ ಮತ್ತು ಅಭಿವೃದ್ಧಿಗೆ ಮತ್ತು ಶಾಲಾಪೂರ್ವದ ಶಿಕ್ಷಣ ಅವಕಾಶಗಳನ್ನು ನಿರ್ದಿಷ್ಟಪಡಿಸಿತು.
- **ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (2005)** ಎರಡು ವರ್ಷಗಳ ಶಾಲಾಪೂರ್ವ ಶಿಕ್ಷಣಕ್ಕೆ ಒತ್ತು ನೀಡಿತು ಹಾಗೂ ECCE ಯು ಮಗುವಿನ ಸಮಗ್ರ ಅಭಿವೃದ್ಧಿಗಾಗಿ, ಶಾಲಾ ಶಿಕ್ಷಣಕ್ಕೆ ಪೂರ್ವಸಿದ್ಧತೆಯಾಗಿ ಹಾಗೂ ಮಹಿಳೆಯರು ಮತ್ತು ಹುಡುಗಿಯರಿಗೆ ನೆರವಿನ ಸೇವೆಯಾಗಿ ಅತ್ಯವಶ್ಯಕ ಎಂದು ಪರಿಗಣಿಸಿತು. ಇದು ನಲಿ-ಕಲಿ ಆಧಾರಿತ, ಬೆಳವಣಿಗೆಯ ಹಿತದೃಷ್ಟಿಯಿಂದ ಸೂಕ್ತವೆನಿಸುವ

ಸಾಂವಿಧಾನಿಕವಾಗಿ, ಮಕ್ಕಳ ಅಭಿವೃದ್ಧಿ ಮತ್ತು ಶಿಕ್ಷಣವು ಉಭಯಹಕ್ಕಿನ ಪಟ್ಟಿಯಲ್ಲಿರುವ ವಿಷಯವಾಗಿದ್ದು, ECCE ಸೇವಾ ತಲುಪಿಸುವಿಕೆಯು ಒಕ್ಕೂಟ ಮತ್ತು ರಾಜ್ಯದ ಒಟ್ಟು ಜವಾಬ್ದಾರಿಯಾಗಿದೆ. ಆದಾಗ್ಯೂ, ECCE ಸೇವೆಗಳ ನೈಜ ಮುನ್ನೇರ್ಪಾಡು, ಅನೇಕ ನೀತಿ ನಿಮಯಗಳು ಮತ್ತು ಸಂಬಂಧಿತ ಕ್ರಿಯಾ ಯೋಜನೆಗಳ ನಿಯಂತ್ರಣಕ್ಕೆ ಒಳಪಟ್ಟಿದೆ ಹಾಗೂ ಇದು **ಶಿಕ್ಷಣದ ಕುರಿತ ರಾಷ್ಟ್ರೀಯ ನೀತಿ**(1986)ಯಿಂದ ಪ್ರಾರಂಭಗೊಳ್ಳುತ್ತದೆ. ಈ ನೀತಿಯು ECCE ಯನ್ನು "ಮಾನವ ಸಂಪನ್ಮೂಲ ಕಾರ್ಯತಂತ್ರದ ಸಮಗ್ರ ದತ್ತ ಮಾಹಿತಿ, ಪ್ರಾಥಮಿಕ ಶಿಕ್ಷಣಕ್ಕೆ ಉಪಕಾರ್ಯಕ್ರಮ ಮತ್ತು ನೆರವು ಕಾರ್ಯಕ್ರಮ ಮತ್ತು ದುಡಿಯುತ್ತಿರುವ ಮಹಿಳೆಯರ ಪಾಲಿಗೆ ನೆರವಿನ ಸೇವೆ" ಎಂದು ಪರಿಗಣಿಸಿತ್ತು (ಭಾರತ ಸರ್ಕಾರ, 1986). ಭಾರತದಲ್ಲಿ ECCE ಸೇವೆಗಳ ಮುನ್ನೇರ್ಪಾಡಿಗೆ ಸಕ್ರಿಯ ಸಂದರ್ಭವನ್ನು ಒದಗಿಸುವ ಕೆಲವು ಹೆಚ್ಚು ಪ್ರಮುಖ ನೀತಿಗಳನ್ನು ರೇಖಾ ಚೌಕ 4.1 ರಲ್ಲಿ ಪಟ್ಟಿಮಾಡಲಾಗಿದೆ.

*ಅನುಕ್ರಮ ಪಂಚವಾರ್ಷಿಕ ಯೋಜನೆಗಳಲ್ಲಿ ECCE:*

ಭಾರತವು 1951ರಲ್ಲಿ ಗಣತಂತ್ರವಾದ ನಂತರ, ದೇಶದ ಅಭಿವೃದ್ಧಿ ಯೋಜನೆಗಳಲ್ಲಿ, ಒಂದಲ್ಲ ಒಂದು ರೀತಿಯಲ್ಲಿ ಮಗುವಿನ ಯೋಗಕ್ಷೇಮಕ್ಕೆ ಗಮನ ನೀಡಲಾಗಿದೆ. ಆದಾಗ್ಯೂ, ಮೂರನೇ ಪಂಚವಾರ್ಷಿಕ ಯೋಜನೆಯ ತನಕ, ECCE ಯು ಸ್ವಯಂಪ್ರೇರಿತ ಮತ್ತು ಖಾಸಗಿ ವಲಯಗಳ ವ್ಯಾಪ್ತಿಯಲ್ಲಿ ಮುಂದುವರಿಯಿತು. ಗಂಗಾ ಸರನ್ ಸಿನ್ಹಾ ಸಮಿತಿ(Ganga Saran Sinha Committee)ಯ ಶಿಫಾರಸ್ಸಿನ ಮೇರೆಗೆ, 1968ರಲ್ಲಿ, ECCE ಯನ್ನು (ಆಗ ಇದನ್ನು ಶಾಲಾಪೂರ್ವದ ಶಿಕ್ಷಣವೆಂದು ಕರೆಯಲಾಗುತ್ತಿತ್ತು) ಸರ್ಕಾರದ ವ್ಯವಹಾರದಲ್ಲಿ ಸೇರ್ಪಡೆಗೊಳಿಸಲಾಯಿತು. ಆದರೂ, ನಾಲ್ಕನೇ ಯೋಜನೆಯ ತನಕ ECCE ಯನ್ನು ಗ್ರಾಮೀಣ ಪ್ರದೇಶಗಳಲ್ಲಿ ಕುಟುಂಬ ಮತ್ತು ಮಕ್ಕಳ ಕಲ್ಯಾಣ ಯೋಜನೆಯ ಅಡಿಯಲ್ಲಿ ಕಲ್ಯಾಣದ ಮುನ್ನೇರ್ಪಾಡಾಗಿ ಪರಿಗಣಿಸಲಾಯಿತು. ಈ ಯೋಜನೆಯ ಉದ್ದೇಶವು, ಶಾಲಾಪೂರ್ವದ ಮಕ್ಕಳಿಗೆ ಅವರ ಸಮಗ್ರ ಬೆಳವಣಿಗೆಗಾಗಿ ಮಕ್ಕಳ ಸಮಗ್ರ ಕಲ್ಯಾಣ ಸೇವೆಗಳನ್ನು ಒದಗಿಸುವುದಾಗಿತ್ತು. ಮೂರನೇ ಪಂಚವಾರ್ಷಿಕ ಯೋಜನೆಯು, *'ಮಕ್ಕಳ ಕಲ್ಯಾಣದಿಂದ ಮಕ್ಕಳ ಅಭಿವೃದ್ಧಿಯತ್ತ'* ಮನೋಭಾವವು ಸ್ಪಷ್ಟವಾಗಿ ಬದಲಾಗಿರುವುದನ್ನು ಗಮನಿಸಿತು. ಯೋಜನೆಯು, ಶಿಶುಗಳು, ಮಕ್ಕಳು (ಆರು ವರ್ಷಗಳ ತನಕ), ಮತ್ತು ಗರ್ಭಿಣಿಯರು ಮತ್ತು ಮೊಲೆ ಹಾಲುಣಿಸುತ್ತಿರುವ ತಾಯಂದಿರ ಯೋಗಕ್ಷೇಮಕ್ಕಾಗಿ ವಿವಿಧ ವಲಯಗಳ ಸಾಮಾಜಿಕ ಏರ್ಪಾಡುಗಳ ಏಕೀಕರಣ ಮತ್ತು ಒಮ್ಮುಖವಾಗುವುದತ್ತ ವಾಲಿತು. ಈ ಬದಲಾವಣೆಯು, *'ಮಕ್ಕಳಿಗಾಗಿ ರಾಷ್ಟ್ರೀಯ ನೀತಿ, 1974'* ರ ಘೋಷಣೆಯಲ್ಲಿ ಹಾಗೂ ಮಕ್ಕಳಿಗಾಗಿ ನೀಡುವ ಆರಂಭಿಕ ಸೇವೆಗಳ ಏಕೀಕರಣದತ್ತ ಪರಿಕಲ್ಪನಾತ್ಮಕ ಹೆಜ್ಜೆ ಇಡುವಲ್ಲಿ ಪರ್ಯವಸನಗೊಂಡಿತು. ಅಂದಿನಿಂದ, ಪ್ರತಿ ಪಂಚವಾರ್ಷಿಕ ಯೋಜನೆಯು, ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ ಹೂಡಿಕೆಯಾಗಿ, ಆರಂಭಿಕ ಬಾಲ್ಯದ ಸೇವೆಗಳನ್ನು ಅಭಿವೃದ್ಧಿ ಮಾಡುವುದನ್ನು ತನ್ನ ಆದ್ಯತೆಯಾಗಿ ಪುನರ್ದೃಢೀಕರಿಸಿತು ಹಾಗೂ ಮುಖ್ಯವಾಗಿ ವಿಕೇಂದ್ರೀಕೃತ *'ಪಂಚಾಯತ್ ರಾಜ್'* ವ್ಯವಸ್ಥೆ ಅಥವಾ ಸ್ಥಳೀಯ ಸರ್ಕಾರದ ವ್ಯವಸ್ಥೆಯಡಿ ECCE ಕಾರ್ಯಕ್ರಮಗಳಲ್ಲಿ ಮಹಿಳಾ ಸಂಗಡಗಳನ್ನು ಒಳಗೊಳ್ಳುವ ಅಗತ್ಯತೆಯನ್ನು ಒತ್ತಿ ಹೇಳಿತು.

ಭಾರತ ಸರ್ಕಾರವು 1989ರಲ್ಲಿ ಮಕ್ಕಳ ಹಕ್ಕುಗಳ ಕುರಿತ ವಿಶ್ವಸಂಸ್ಥೆಯ ಒಪ್ಪಂದವನ್ನು ಅನುಮೋದಿಸಿತು ಹಾಗೂ ಇದು ಇನ್ನೊಂದು ಬದಲಾವಣೆಗೆ ದಾರಿ ಮಾಡಿ ಕೊಟ್ಟಿತು. ಈ ಬಾರಿ *'ಮಕ್ಕಳ ಅಭಿವೃದ್ಧಿಯಿಂದ ಮಕ್ಕಳ ಹಕ್ಕುಗಳತ್ತ'* ಈ ಬದಲಾವಣೆಯು ವಾಲಿತು! ಇದು ಈ ಒಪ್ಪಂದದಿಂದ ಉಂಟಾಗುವ ಕಾಳಜಿಗಳನ್ನು ಹಾಗೂ ಮೂರು ವರ್ಷಗಳ ಕೆಳಗಿನ ಮಕ್ಕಳಿಗೆ ಇದು ನಿರ್ದಿಷ್ಟವಾಗಿ ನೀಡುವ ಒತ್ತನ್ನು ಪರಿಗಣಿಸಿತು. ಇದಕ್ಕೆ ಅನುಗುಣವಾಗಿ ಎಂಟನೇ ಪಂಚವಾರ್ಷಿಕ ಯೋಜನೆಯ ವೇಳೆ (1992-97), ರಾಷ್ಟ್ರೀಯ ಕ್ರಿಯಾ ಯೋಜನೆ: ಮಗುವಿಗೆ ಬದ್ಧತೆ, 1992 (NPA) ಅನ್ನು ಸೂತ್ರೀಕರಿಸಲಾಯಿತು. NPA ಚೌಕಟ್ಟಿನ ಅಡಿಯಲ್ಲಿ, ಪ್ರತಿ ರಾಜ್ಯವೂ, ತನ್ನ ರಾಜ್ಯದ ಮಕ್ಕಳ ಅಭಿವೃದ್ಧಿಯ ಸೂಚಕಗಳನ್ನು ಮತ್ತು ಸಂಪನ್ಮೂಲದ ಸ್ಥಿತಿಗತಿಯನ್ನು ಆಧರಿಸಿ ಮಕ್ಕಳಿಗಾಗಿ ತನ್ನದೇ ಆದ ಕ್ರಿಯಾ ಯೋಜನೆಯನ್ನು ರೂಪಿಸಲು ಉತ್ತೇಜಿಸಲಾಯಿತು. ರಾಜ್ಯ ಕ್ರಿಯಾ ಯೋಜನೆಗಳು, ಮಗುವಿನ ರಕ್ಷಣೆ, ಬದುಕುಳಿಯುವಿಕೆ, ಅಭಿವೃದ್ಧಿ ಮತ್ತು ಬೆಳವಣಿಗೆಗಾಗಿ ಬಹು-ಆಯಾಮಗಳ ವಿಚಾರಗಳನ್ನು ಪರಿಗಣಿಸಬೇಕೆಂದು ಹಾಗೂ ಕ್ರಿಯಾ ಯೋಜನೆಯ ಪಥವನ್ನು ನಿರ್ದೇಶಿಸುವುದಕ್ಕಾಗಿ ಸಮಯಾಧಾರಿತ ಗುರಿಗಳು ಮತ್ತು ಕಾರ್ಯತಂತ್ರಗಳನ್ನು

ನೀಡಬೇಕೆಂದು ನಿರೀಕ್ಷಿಸಲಾಯಿತು. ಹತ್ತನೇ ಪಂಚವಾರ್ಷಿಕ ಯೋಜನೆಯು (2002-2007) ಮಕ್ಕಳ ಬದುಕುಳಿಯುವಿಕೆ, ರಕ್ಷಣೆ ಮತ್ತು ಬೆಳವಣಿಗೆಯನ್ನು ಖಾತರಿಪಡಿಸುವುದಕ್ಕಾಗಿ, ದೇಶದ ಪ್ರತಿ ಎಳೆಯ ಮಗುವನ್ನು ತಲುಪಲು ಪ್ರಮುಖ ಕಾರ್ಯತಂತ್ರಗಳನ್ನು ಕಲ್ಪಿಸಿಕೊಳ್ಳುವುದರೊಂದಿಗೆ ಮಕ್ಕಳ ಅಭಿವೃದ್ಧಿಗಾಗಿ ಹಕ್ಕು ಆಧರಿತ ವಿಧಾನದ ಮೇಲೆ ಗಮನ ಹರಿಸಿತು. ಅಲ್ಲದೆ, ಹತ್ತನೇ ಯೋಜನೆಯು, ಮುಖ್ಯವಾಗಿ ಸಂಘಟಿತ ಮತ್ತು ಅಸಂಘಟಿತ ವಲಯಗಳಲ್ಲಿ ಹೆಚ್ಚು ಹೆಚ್ಚು ಮಹಿಳೆಯರು ಉದ್ಯೋಗಕ್ಕಾಗಿ ಹೊರಬರುತ್ತಿರುವ ಹಿನ್ನೆಲೆಯಲ್ಲಿ, ದುಡಿಯುವ ಮತ್ತು ಅನಾರೋಗ್ಯಕ್ಕೆ ಈಡಾಗಿರುವ ತಾಯಂದಿರ ಮಕ್ಕಳಿಗಾಗಿ ಬಾಲವಾಡಿಗಳು ಮತ್ತು ದಿನ ಆರೈಕೆ ಕೇಂದ್ರಗಳಿಗೆ ಬೇಕಾಗುವ ಹೆಚ್ಚಿನ ನೆರವು ಸೇವೆಗಳನ್ನು ಗುರುತಿಸಿತು.

ಪ್ರಸ್ತುತ ಹನ್ನೊಂದನೇ ಪಂಚವಾರ್ಷಿಕ ಯೋಜನೆಯು (2007-2012), ಹಕ್ಕು ಆಧರಿತ ವಿಧಾನಗಳ ಮುಂದುವರಿಕೆಯೊಂದಿಗೆ ಮಕ್ಕಳ ಅಭಿವೃದ್ಧಿಯನ್ನು "ಯೋಜನೆಯ ಕೇಂದ್ರ ಸ್ಥಾನದಲ್ಲಿ"ರಿಸಿದೆ. ಇದು, ಸಮುದಾಯದ ಸಕ್ರಿಯ ಪಾಲ್ಗೊಳ್ಳುವಿಕೆಯೊಂದಿಗೆ, ICDS ಕಾರ್ಯಕ್ರಮದ ಪರಿಣಾಮಕಾರಿ ಜಾರಿಗೊಳಿಸುವಿಕೆಯ ಮೂಲಕ ಪ್ರಸವಪೂರ್ವದಿಂದ ಆರು ವರ್ಷಗಳ ತನಕದ ಮಕ್ಕಳಿಗೆ ಸೂಕ್ತ ಆರಂಭವನ್ನು ಒದಗಿಸುವ ಉದ್ದೇಶವನ್ನು ಹೊಂದಿದೆ. ECCE ಯ ಕಾರ್ಯ ಗುಂಪು, ಇದನ್ನು ಸಂವಿಧಾನದ ಮೂಲಭೂತ ಹಕ್ಕಿನ ತಿದ್ದುಪಡಿಯಲ್ಲಿ ಸೇರ್ಪಡೆಗೊಳಿಸಬೇಕು ಎಂದು ಶಿಫಾರಸ್ಸು ಮಾಡಿದೆ ಹಾಗೂ ಅಗತ್ಯವಿದ್ದಲ್ಲಿ ECCE ಗೆ ಸಂಬಂಧಿಸಿದ ಹೊಸ ನೀತಿಯೊಂದನ್ನು ಸೂತ್ರೀಕರಿಸಬೇಕೆಂದು ಹೇಳಿದೆ. ಇದು ಗುಣಮಟ್ಟ ಮತ್ತು ಲಭ್ಯತೆ ಎರಡಕ್ಕೂ ಪ್ರಾಮುಖ್ಯತೆ ನೀಡುತ್ತದೆ ಹಾಗೂ ಮಾನ್ಯತೆ, ನಿಯಂತ್ರಕ ಕಾರ್ಯವಿಧಾನಗಳು, ECCE ಗಾಗಿ ಕನಿಷ್ಠ ಮಾನದಂಡಗಳ ಸಾಮರ್ಥ್ಯ ಬೆಳಸಿಕೊಳ್ಳುವುದು ಮುಂದಾದ ಕಾಳಜಿಗಳಿಗೆ ಒತ್ತು ನೀಡುತ್ತದೆ.

## ಭಾರತದಲ್ಲಿ ECCE ಸೇವೆಗಳು

ಪ್ರಸವಪೂರ್ವದಿಂದ ಹಿಡಿದು ಆರು ವರ್ಷಗಳ ತನಕದ ECCE ಕುರಿತ ಪ್ರಮುಖ ಜವಾಬ್ದಾರಿಯು ಪ್ರಸ್ತುತ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯದ (Ministry of Women and Child Devlopment (MWCD)) ಮೇಲಿದ್ದರೂ, ಇದರ ಏಕೀಕೃತ ಗುಣಲಕ್ಷಣದ ಕಾರಣ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ (Ministry of Health and Family Welfare (MF&FW)), ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ (Ministry of Human Resource Development (MHRD)), ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯ (Ministry of Social Justice and Empowerment (MSJ&E)) ಇತ್ಯಾದಿ ಇತರ ಸಚಿವಾಲಯಗಳೂ ಸಹ ಒಂದಲ್ಲ ಒಂದು ರೀತಿಯಲ್ಲಿ ಇದರಲ್ಲಿ ಒಳಗೊಂಡಿವೆ. ECCE ಸೇವೆಗಳ ಮುನ್ನೇರ್ಪಾಡು ಮಾಡುವ ವಿಚಾರದಲ್ಲಿ, ಪೌಷ್ಠಿಕಾಂಶ, ಆರೋಗ್ಯ ಮತ್ತು ಶೈಕ್ಷಣಿಕ ಘಟಕಗಳನ್ನು ಒದಗಿಸುವ ನಿಟ್ಟಿನಲ್ಲಿ ನಿರ್ದಿಷ್ಟ ವಯೋಮಾನದ ಮಕ್ಕಳಿಗೆ ಪ್ರತಿ ಸಚಿವಾಲಯವು ತನ್ನ ಸಂಬಂಧಿತ ವಲಯದ ಜವಾಬ್ದಾರಿಯನ್ನು ಹೊಂದಿದೆ. ಭಾರತದಲ್ಲಿ ECCE ಮುನ್ನೇರ್ಪಾಡುಗಳು ಸರ್ಕಾರಿ, ಖಾಸಗಿ ಮತ್ತು ಸರ್ಕಾರೇತರ – ಹೀಗೆ ಮೂರು ವಿಶಿಷ್ಟ ವಾಹಕಗಳ ಮೂಲಕ ಲಭ್ಯ ಇವೆ.

## ಸರ್ಕಾರಿ ಉಪಕ್ರಮಗಳು

ಸರ್ಕಾರಿ ಪ್ರಾಯೋಜಿತ ಕಾರ್ಯಕ್ರಮಗಳನ್ನು ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ನೆಲೆಸಿರುವ ಅನನುಕೂಲ ಸ್ಥಿತಿಯಲ್ಲಿರುವ ಸಮುದಾಯಗಳತ್ತ ನಿರ್ದೇಶಿಸಲಾಗಿದೆ. ವಿವಿಧ

ಇಲಾಖೆಗಳು ಮತ್ತು ಸಚಿವಾಲಯಗಳ ಅಡಿಯಲ್ಲಿ ಸುಮಾರು 130 ಕಾರ್ಯಕ್ರಮಗಳಿದ್ದು, ಇವು ಮುಖ್ಯವಾಗಿ 0-6 ವರ್ಷಗಳ ಮಕ್ಕಳ ಅಭಿವೃದ್ಧಿಗೆ ಒತ್ತು ನೀಡುತ್ತವೆ. 3-6 ವರ್ಷಗಳ ವಯಸ್ಸಿನ ಮಕ್ಕಳಿಗಾಗಿರುವ ಹೆಚ್ಚು ಪ್ರಮುಖವಾದ ಕಾರ್ಯಕ್ರಮಗಳನ್ನು ಕೆಳಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

*ಸಮಗ್ರ ಮಕ್ಕಳ ಅಭಿವೃದ್ಧಿ ಸೇವೆಗಳು (ICDS):*

ಭಾರತ ಸರ್ಕಾರವು, EFA ಅಡಿಯಲ್ಲಿ ECCE ಯ ಮೊದಲ ಗುರಿಯನ್ನು ಸಾಧಿಸುವುದಕ್ಕಾಗಿ ತನ್ನ ಮೂಲಭೂತ ಕಾರ್ಯತಂತ್ರವಾಗಿ ICDS ನ ಸಾರ್ವತ್ರೀಕರಣವನ್ನು ಗುರುತಿಸಿದೆ. ಅಪೌಷ್ಠಿಕತೆಗೆ ಸಂಬಂಧಿಸಿದ 'ಸಹಸ್ರಮಾನ ಅಭಿವೃದ್ಧಿ ಗುರಿ'ಯನ್ನು ಸಾಧಿಸುವುದಕ್ಕಾಗಿ ಸಹ ಇದು ಅತ್ಯಗತ್ಯವೆನಿಸಿದೆ. ICDS ಅನ್ನು ಪ್ರಾಯೋಗಿಕ ನೆಲೆಯಲ್ಲಿ 1975ರಲ್ಲಿ ಪ್ರಾರಂಭಿಸಲಾಯಿತು. ಕಳೆದ 30 ವರ್ಷಗಳಲ್ಲಿ, 2006ರ ಸೆಪ್ಟೆಂಬರ್ 30ಕ್ಕೆ ಅನ್ವಯವಾಗುವಂತೆ, ಈ ಯೋಜನೆಯು ದೇಶದ 35 ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಲ್ಲಿ ಮಂಜೂರಾದ 5659 ಪ್ರಾಜೆಕ್ಟ್ ಗಳು ಮತ್ತು 7,48,059 ಅಂಗನವಾಡಿ ಕೇಂದ್ರಗಳಿಗೆ ವ್ಯಾಪಿಸಿದೆ. ಪ್ರತಿ ಪ್ರಾಜೆಕ್ಟ್, ಅತ್ಯಂತ ಸಣ್ಣ ಆಡಳಿತಾತ್ಮಕ ಘಟಕವಾದ ಬ್ಲಾಕ್ ಅನ್ನು ಒಳಗೊಂಡಿರುತ್ತದೆ. ಈ ಕಾರ್ಯಕ್ರಮವು, ಕೊಳಚೆ ಪ್ರದೇಶಗಳು ಮತ್ತು ಅಭಿವೃದ್ಧಿಯಾಗದ ಪ್ರದೇಶಗಳಲ್ಲಿ 523 ICDS ಪ್ರಾಜೆಕ್ಟ್ ಗಳ ಅತ್ಯಂತ ಸಣ್ಣ ಪ್ರಮಾಣದ ನಗರ ಘಟಕದೊಂದಿಗೆ, ಮುಖ್ಯವಾಗಿ ಗ್ರಾಮೀಣ ಮತ್ತು ಬುಡಕಟ್ಟು ಜನಸಂಖ್ಯೆಯನ್ನು ಒಳಗೊಂಡಿರುತ್ತದೆ. ಹೀಗೆ, ಈ ದೇಶದಲ್ಲಿ ನಗರ ಪ್ರದೇಶಗಳ ಜನಸಂಖ್ಯೆಯ ಪ್ರಮಾಣ ಸರಿಸುಮಾರು 27.78 ಶೇಕಡಾ ಆಗಿದ್ದರೂ, ICDS ಯೋಜನೆಗಳ ಕೇವಲ ಸುಮಾರು 13 ಶೇಕಡಾವನ್ನು ನಗರ ಪ್ರದೇಶಗಳಲ್ಲಿ ನೆಲೆಗೊಳಿಸಲಾಗಿದ್ದು, ಈ ಮೂಲಕ ನಗರ ಪ್ರದೇಶಗಳ ಬಡವರಿಗೆ ಈ ಸೇವೆಗಳನ್ನು ಮಿತಿಗೊಳಿಸಲಾಗಿದೆ. ICDS ಕಾರ್ಯಕ್ರಮವು, ಜೀವನಚಕ್ರ ವಿಧಾನವನ್ನು ಅನುಸರಿಸಿ, ಗರ್ಭಿಣಿ ಮತ್ತು ಮೊಲೆ ಹಾಲುಣಿಸುವ ತಾಯಂದಿರು ಹಾಗೂ ಪ್ರಸವಪೂರ್ವ ಹಂತದಿಂದ ಆರು ವರ್ಷ ವಯಸ್ಸಿನ ತನಕ, ಮಕ್ಕಳಿಗೆ ಆರೋಗ್ಯ, ಪೌಷ್ಠಿಕಾಂಶ ಮತ್ತು ಶಾಲಾಪೂರ್ವ ಶಿಕ್ಷಣ ಸೇವೆಗಳನ್ನು ಒದಗಿಸುತ್ತಿದೆ. ಕೆಲವು ICDS ಕೇಂದ್ರಗಳನ್ನು, ಎಳೆಯ ಮಕ್ಕಳಿಗೆ ಬಾಲವಾಡಿಗಳನ್ನು ಸೇರ್ಪಡೆಗೊಳಿಸುವುದಕ್ಕಾಗಿ ವಿಸ್ತರಿಸಲಾಗಿದೆ. ಆದರೆ ಈ ಬಾಲವಾಡಿಗಳ ಸಂಖ್ಯೆಯು ನಗಣ್ಯವಾಗಿದೆ. NIPCCD (2004) ನಡೆಸಿದ ಅಧ್ಯಯನವೊಂದರ ಪ್ರಕಾರ, ಈ ಬಾಲವಾಡಿಗಳು ಬಹುಮಟ್ಟಿಗೆ ಪಾಲನೆಗೆ ಸಂಬಂಧಿಸಿದ್ದಾಗಿದ್ದು ಅವು 3 ವರ್ಷಗಳ ವಯಸ್ಸಿನ ಕೆಳಗಿನ ಮಕ್ಕಳ ಬೆಳವಣಿಗೆಗೆ ಬಹಳ ಮುಖ್ಯವಾದ ಆರಂಭಿಕ ಉತ್ತೇಜನ ಮತ್ತು ಮಾನಸಿಕ – ಸಾಮಾಜಿಕ ಅಂತರಕ್ರಿಯೆಯ ಅನುಭವವನ್ನು ಬಿಟ್ಟುಬಿಡುವ ಪ್ರವೃತ್ತಿಯನ್ನು ಹೊಂದಿವೆ.

ICDS ಯೋಜನೆಯು ದೇಶದ ಎಲ್ಲಾ ಮಕ್ಕಳಿಗೆ ತಲುಪುವುದಕ್ಕಾಗಿ ಇದನ್ನು ಸಾರ್ವತ್ರೀಕರಣಗೊಳಿಸಬೇಕು ಎಂದು ಸರ್ವೋಚ್ಚ ನ್ಯಾಯಾಲಯವು ತೀರ್ಪು ನೀಡಿರುವ ಕಾರಣ, ಈ ಯೋಜನೆಯ ಬಜೆಟ್ ಹಂಚಿಕೆಯಲ್ಲಿಯೂ ಗಣನೀಯ ಪ್ರಮಾಣದ ಹೆಚ್ಚಳ ಉಂಟಾಗಿದೆ. ನಿರಂತರವಾಗಿ ಅನೇಕ ಯೋಜನೆಗಳ ಮೂಲಕ ಬಹುಪಕ್ಷೀಯ ಮತ್ತು ದ್ವಿಪಕ್ಷೀಯ ಸಂಸ್ಥೆಗಳಿಂದಲೂ ಬಾಹ್ಯ ನೆರವನ್ನು ಪಡೆಯುವ ಮೂಲಕ ICDS ಪ್ರಯೋಜನವನ್ನು ಪಡೆದಿದೆ. ಒಟ್ಟಾರೆಯಾಗಿ ಗಂಭೀರ ಅಪೌಷ್ಠಿಕತೆಯ ಪ್ರಮಾಣದ ಮೇಲೆ ICDS ಒಂದಷ್ಟು ಪರಿಣಾಮವನ್ನು ಉಂಟು ಮಾಡಿದ್ದರೂ, ಮಧ್ಯಮ ಮತ್ತು ಲಘು ಪ್ರಮಾಣದ ಅಪೌಷ್ಠಿಕತೆಯು ದೇಶದ ಮಕ್ಕಳಲ್ಲಿ ಎಗ್ಗಿಲ್ಲದೆ ಮುಂದುವರಿಯುತ್ತಿದೆ (UNESCO, 2006). ಈ ಸೀಮಿತ ಪರಿಣಾಮಕ್ಕೆ ಗುರುತಿಸಲಾದ ಕೆಲವು ಅಂಶಗಳೆಂದರೆ: (a)

ಮಕ್ಕಳಲ್ಲಿ ಪೌಷ್ಠಿಕಾಂಶದ ಯೋಗಕ್ಷೇಮವನ್ನು ಖಾತರಿಪಡಿಸುವ ನಿರ್ಣಾಯಕ ಹಂತವು ಬದುಕಿನ ಮೊದಲ ಮೂರು ವರ್ಷಗಳಾಗಿದ್ದರೆ, ಈ ಕಾರ್ಯಕ್ರಮವು 3-6 ವರ್ಷಗಳ ಮಕ್ಕಳ ಮೇಲೆ ಗಮನ ಹರಿಸುತ್ತದೆ; (b) ಆಹಾರದ ವಿಚಾರಕ್ಕೆ ಹೆಚ್ಚು ಗಮನ ನೀಡಲಾಗುತ್ತಿದೆಯೇ ಹೊರತು, ಸಮುದಾಯದಲ್ಲಿ ಮಗುವಿನ ಆರೈಕೆ ವಿಧಾನಗಳಲ್ಲಿ ವರ್ತನೆಯ ಬದಲಾವಣೆಗೆ (ಇದು ಹೆಚ್ಚು ಸುಸ್ಥಿರ ಸಾಧ್ಯತೆ) ಉತ್ತೇಜನ ನೀಡಲಾಗುತ್ತಿಲ್ಲ. ಪ್ರಾಯಶಃ, ಪರಸ್ಪರ ಸಾಮಾಜಿಕ ಸಂವಾದ ಮತ್ತು ವರ್ತನೆಯ ಬದಲಾವಣೆಯನ್ನು ಪ್ರತಿಷ್ಠಾಪಿಸುವುದು ಮತ್ತು ಸಾಧಿಸುವುದು ಅತ್ಯಂತ ಸಂಕೀರ್ಣವಾದದ್ದಾಗಿದ್ದರೆ, ಮಕ್ಕಳಿಗೆ ಆಹಾರ ಒದಗಿಸುವುದು ಹೆಚ್ಚು ಸರಳ ಕೆಲಸವಾಗಿದೆ. ಇದೆಲ್ಲವನ್ನೂ ಒಂಟಿ ಅಂಗನವಾಡಿ ಕಾರ್ಯಕರ್ತೆಯು ಮಾಡಬೇಕಂಬ ನಿರೀಕ್ಷೆಯಿದೆ, ಆದರೆ ಸಾಮಾನ್ಯವಾಗಿ ಆಕೆಯು ಸಾಕಷ್ಟು ಶಿಕ್ಷಣವನ್ನು ಪಡೆದಿರುವುದಿಲ್ಲ ಹಾಗೂ ಈ ಸಂಕೀರ್ಣ ಸವಾಲನ್ನು ನಿಭಾಯಿಸಲು ಬೇಕಾದ ಕೌಶಲ್ಯಗಳನ್ನು ಹೊಂದಿಲ್ಲದೆ ಇರಬಹುದು. ಆದಾಗ್ಯೂ, ಗುಣಮಟ್ಟ ಮತ್ತು ಪರಿಣಾಮದಲ್ಲಿ ರಾಜ್ಯವಾರು ಭಿನ್ನತೆಗಳಿದ್ದು, ದಕ್ಷಿಣದ ರಾಜ್ಯಗಳು ಉತ್ತಮವಾಗಿ ಕಾರ್ಯನಿರ್ವಹಿಸಿವೆ. ಬಹುಮಟ್ಟಿಗೆ ಹೆಚ್ಚಿನ ಸಾಕ್ಷರತೆ ದರ ಹಾಗೂ ಉತ್ತಮ ಆಡಳಿತ ವಾತಾವರಣದ ಕಾರಣ ಇದು ಸಾಧ್ಯವಾಗಿದೆ. (c) ಆರು ಬೇರೆ ಬೇರೆ ವಲಯಗಳ ಸೇವೆಗಳನ್ನು ಸಮುದಾಯ ಆಧಾರಿತ ಏಕೈಕ ಸೇವಾ ಪೂರೈಕೆದಾರರಾದ ಅಂಗನವಾಡಿ ಕಾರ್ಯಕರ್ತೆಯ ಮೂಲಕ ಪ್ರಸವಪೂರ್ವದಿಂದ ಆರು ವರ್ಷಗಳ ವರೆಗಿನ ಎಲ್ಲಾ ಮಕ್ಕಳಿಗೆ ಒದಗಿಸಬೇಕಾದರೆ, ICDS ಸೇವಾ ತಲುಪಿಸುವಿಕೆ ನಿಜಕ್ಕೂ ಕಷ್ಟಕರವಾದ ಆದೇಶವೇ ಸರಿ! ಇದರಲ್ಲಿ ಸಾಮಾನ್ಯವಾಗಿ ಗಮನಿಸಿದ ಫಲಿತಾಂಶವೆಂದರೆ, ಆರು ಸೇವೆಗಳ ಪೈಕಿ, ಸರಿಯಾಗಿ ಮಾಡಿದರೆ, ಶಾಲಾಪೂರ್ವದ ಶಿಕ್ಷಣವು ಅತ್ಯಂತ ಹೆಚ್ಚಿನ 'ಸಮಯ ಮತ್ತು ಪ್ರಯತ್ನ'ವನ್ನು ಬೇಡುವ ಕಾರ್ಯವಾಗಿದೆ ಮತ್ತು ಆದ್ದರಿಂದ, ಹೆಚ್ಚಿನ ಪ್ರಕರಣಗಳಲ್ಲಿ ಅಗತ್ಯ ಗಮನವನ್ನು ಸಹ ನೀಡಲಾಗುತ್ತಿಲ್ಲ.

ICDS IV ಮೂಲಕ ಬಾಹ್ಯ ನೆರವನ್ನು ಒದಗಿಸುವ ಮುಂದಿನ ಆವರ್ತವು ಸಿದ್ಧತೆಯ ಹಂತದಲ್ಲಿದೆ. ಈ ಯೋಜನೆಯು ಇಂತಹ ಸಮಸ್ಯೆಗಳಿಗೆ ಗಮನ ಹರಿಸಲಿದೆ ಹಾಗೂ ಒಟ್ಟಾರೆಯಾಗಿ ಈ ಕಾರ್ಯಕ್ರಮಕ್ಕೆ ಕೆಲವೊಂದು ಒಳ್ಳೆಯ ಕಾರ್ಯರೀತಿಗಳನ್ನು ತೋರಿಸಲಿದೆ ಎಂದು ನಿರೀಕ್ಷಿಸಲಾಗಿದೆ. ICDS IV, ಕಾರ್ಯಕ್ರಮದ ನೀತಿ ಮಟ್ಟದ ಅಂಶಗಳಿಗೆ ಗಮನ ಹರಿಸುವುದಕ್ಕಾಗಿ ಸಣ್ಣ ಪ್ರಮಾಣದಲ್ಲಿ ರಾಷ್ಟ್ರೀಯ ಘಟಕ ಹಾಗೂ ಅಪೌಷ್ಠಿಕತೆಯ ವಿಚಾರದಲ್ಲಿ ಅತ್ಯಂತ ಹೆಚ್ಚಿನ ಹೊರೆ ಹೊಂದಿರುವ ಎಂಟು ರಾಜ್ಯಗಳಿಗೆ ಗಮನ ನೀಡುವ ದೊಡ್ಡ ಪ್ರಮಾಣದ ರಾಜ್ಯ ಘಟಕ - ಹೀಗೆ ಎರಡು ಭಿನ್ನ ವಿಧಾನಗಳನ್ನು ಅಳವಡಿಸಲಿದೆ. ಈ ರಾಜ್ಯಗಳೊಳಗೆ, ಅಪೌಷ್ಠಿಕತೆ ಮತ್ತು ಪ್ರಾಥಮಿಕ ಶಿಕ್ಷಣದಲ್ಲಿ ಪಾಲ್ಗೊಳ್ಳುವಿಕೆಯ ವಿಚಾರದಲ್ಲಿ ಅತ್ಯಂತ ಕಳಪೆ ಸಾಧನೆ ಮಾಡಿರುವ ಜಿಲ್ಲೆಗಳನ್ನು ಒಳಗೊಳ್ಳಲಾಗುವುದು. ಈ ಯೋಜನೆಯು, ವಯಸ್ಸಿನ ಪ್ರಕಾರ ನೀಡುವ ಆದ್ಯತೆಯನ್ನು ಆಧರಿಸಿ ಎರಡು ವಿಶಿಷ್ಟ ಘಟಕಗಳನ್ನು ಹೊಂದಿರಲಿದೆ. ಅವೆಂದರೆ, ಮೂರು ವರ್ಷಗಳ ಕೆಳಗಿನ ಮಕ್ಕಳಿಗಾಗಿ *'ಪೌಷ್ಠಿಕಾಂಶದ ಘಟಕ'*. ಈ ಅವಧಿಯು ಬೆಳವಣಿಗೆಯು ತಡವರಿಸುವ ವಿಚಾರದಲ್ಲಿ ಅತ್ಯಂತ ಅಪಾಯದ ಅವಧಿಯಾಗಿದೆ. ಎರಡನೆಯದಾಗಿ 3-6 ವರ್ಷಗಳೊಳಗಿನ ಮಕ್ಕಳಿಗೆ ECCE ಮತ್ತು ಶಾಲಾ ಪೂರ್ವಸಿದ್ಧತೆ ಕಾರ್ಯಯೋಜನೆಗಳು. ಈ ಯೋಜನೆಯಲ್ಲಿ ಸ್ಪಷ್ಟ ಬದಲಾವಣೆ ತರಬೇಕೆಂದರೆ, ಕಾರ್ಯಕ್ರಮದ ವಿನ್ಯಾಸವನ್ನು ಹೆಚ್ಚು ಹೊಂದಿಕೊಳ್ಳುವಂತೆ ರೂಪಿಸಿ ವಿಕೇಂದ್ರೀಕೃತಗೊಳಿಸುವುದು. ಜತೆಗೆ ನಾವಿನ್ಯತೆಯನ್ನು ಉತ್ತೇಜಿಸಿ ಪೌಷ್ಠಿಕತೆ ಮತ್ತು ECCE - ಈ ಎರಡು ಸೇವೆಗಳನ್ನು ಸೇವಾ ತಲುಪಿಸುವಿಕೆಗೆ

ಸಂಬಂಧಿಸಿದಂತೆ ವಿಶಿಷ್ಟ ಕಾರ್ಯಗಳನ್ನಾಗಿ, ಹಾಗೂ ಸಾಧ್ಯವಿದ್ದಲ್ಲಿ, ಪ್ರತ್ಯೇಕ ಸುಗಮದಾರರು/ಕಾರ್ಯಕರ್ತೆಯರನ್ನು ಒದಗಿಸುವ ಮೂಲಕ ರೂಪಿಸುವುದು.

*MWCD ಜೊತೆಗಿನ ಇತರ ಯೋಜನೆಗಳು:*

ಈ ಹಿಂದೆ, ICDS ಗೆ ಹೆಚ್ಚುವರಿಯಾಗಿ, ಇತರ ಎರಡು ಯೋಜನೆಗಳು ECCE ಸೌಲಭ್ಯವನ್ನು ಒದಗಿಸುತ್ತಿದ್ದವು. ಅವುಗಳೆಂದರೆ, ಆರಂಭಿಕ ಬಾಲ್ಯ ಶಿಕ್ಷಣ ಯೋಜನೆ ಮತ್ತು ದುಡಿಯುತ್ತಿರುವ ಹಾಗೂ ಅನಾರೋಗ್ಯಪೀಡಿತ ತಾಯಂದಿರ ಮಕ್ಕಳಿಗಾಗಿ ಇರುವ ಬಾಲವಾಡಿಗಳನ್ನು ನಡೆಸುವುದಕ್ಕಾಗಿ ಸ್ವಯಂಸೇವಾ ಸಂಸ್ಥೆಗಳಿಗೆ ನೆರವು ನೀಡುವ ಯೋಜನೆ. ಆರಂಭಿಕ ಬಾಲ್ಯ ಶಿಕ್ಷಣ ಯೋಜನೆಯನ್ನು (ECE) ಶಿಕ್ಷಣ ಇಲಾಖೆಯು 1982ರಲ್ಲಿ ಪ್ರಾರಂಭಿಸಿತು ಹಾಗೂ 1987-88ರಲ್ಲಿ ಇದನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (MWCD)ಗೆ ವರ್ಗಾಯಿಸಲಾಯಿತು. ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳ ಹಿಡಿದಿಡುವಿಕೆಯನ್ನು ಸುಧಾರಿಸುವುದಕ್ಕಾಗಿ ಒಂದು ವಿಶಿಷ್ಟ ಕಾರ್ಯತಂತ್ರವಾಗಿ ಇದನ್ನು ರೂಪಿಸಲಾಯಿತು. ಈ ಉದ್ದೇಶಕ್ಕಾಗಿ, ICDS ಅಡಿಯಲ್ಲಿ ಬರದ ಪ್ರದೇಶಗಳಲ್ಲಿರುವ, ಶೈಕ್ಷಣಿಕವಾಗಿ ಹಿಂದುಳಿದಿರುವ ಒಂಬತ್ತು ರಾಜ್ಯಗಳಲ್ಲಿ ಶಾಲಾಪೂರ್ವ ಶಿಕ್ಷಣ ಕೇಂದ್ರಗಳನ್ನು ನಡೆಸುವುದಕ್ಕಾಗಿ ಸ್ವಯಂಸೇವಾ ಸಂಸ್ಥೆಗಳಿಗೆ ಅನುದಾನವನ್ನು ಒದಗಿಸಲಾಯಿತು. ICDS ನ ಸಾರ್ವತ್ರೀಕರಣದ ಕಾರಣ ಈ ಯೋಜನೆಯನ್ನು 2001ರಲ್ಲಿ ನಿಲ್ಲಿಸಲಾಯಿತು. ದುಡಿಯುತ್ತಿರುವ ತಾಯಂದಿರ ಮಕ್ಕಳಿಗಾಗಿ *'ರಾಜೀವ್ ಗಾಂಧಿ ರಾಷ್ಟ್ರೀಯ ಬಾಲವಾಡಿ ಯೋಜನೆ'* ಎಂದು ಹೊಸ ಬಾಲವಾಡಿ ಯೋಜನೆಯನ್ನು ಇತ್ತೀಚೆಗೆ ಜಾರಿಗೆ ತರಲಾಗಿದೆ. ರಾಷ್ಟ್ರೀಯ ಬಾಲವಾಡಿ ನಿಧಿ ಮತ್ತು ಅನಾರೋಗ್ಯಪೀಡಿತ ತಾಯಂದಿರ ಮಕ್ಕಳಿಗಾಗಿ ಬಾಲವಾಡಿಗಳನ್ನು ನಡೆಸುವುದಕ್ಕಾಗಿ ಸ್ವಯಂಸೇವಾ ಸಂಸ್ಥೆಗಳಿಗೆ ನೆರವಿನ ಯೋಜನೆ – ಇವೆರಡು ಯೋಜನೆಗಳನ್ನು ವಿಲೀನಗೊಳಿಸಿ ಈ ಯೋಜನೆಯನ್ನು ವಿನ್ಯಾಸಗೊಳಿಸಲಾಗಿದೆ. ಈ ಯೋಜನೆಯ ಅಡಿಯಲ್ಲಿ ಒದಗಿಸಲಾದ ಸೇವೆಗಳು ಮಕ್ಕಳಿಗೆ ಮಲಗುವ ಸೌಲಭ್ಯಗಳು, ಆರೋಗ್ಯ ಸೇವೆ, ಪೂರಕ ಪೌಷ್ಠಿಕಾಂಶ, ಲಸಿಕೀಕರಣ, ಶಾಲಾಪೂರ್ವದ ಶಿಕ್ಷಣ ಇತ್ಯಾದಿಗಳನ್ನು ಒಳಗೊಂಡಿದೆ. ಪ್ರತಿ ಬಾಲವಾಡಿ ಘಟಕವು ಈ ಸೇವೆಗಳನ್ನು ಬೆಳಿಗ್ಗೆ 9ರಿಂದ ಸಂಜೆ 5ರ ತನಕ ಎಂಟು ಗಂಟೆಗಳ ಕಾಲ 25 ಮಕ್ಕಳಿಗೆ ಒದಗಿಸುತ್ತದೆ. ಸದ್ಯಕ್ಕೆ, ವಿಶೇಷವಾಗಿ ಇನ್ನೂ ಒಳಗೊಳ್ಳದ ಜಿಲ್ಲೆಗಳು/ ಬುಡಕಟ್ಟು ಪ್ರದೇಶಗಳಿಗಾಗಿ ದೇಶದಾದ್ಯಂತ 22038 ಬಾಲವಾಡಿಗಳಿಗೆ ಮಂಜೂರಾತಿ ನೀಡಲಾಗಿದೆ. ಆದರೆ ಇಲ್ಲಿರುವ ಸವಾಲು ಏನೆಂದರೆ, ಈ ಬಾಲವಾಡಿಗಳು ಬರೇ ಲಾಲನೆ ಪಾಲನೆಯನ್ನು ಮಾಡದೆ ಮಕ್ಕಳ ಮಾನಸಿಕ – ಸಾಮಾಜಿಕ ಬೆಳವಣಿಗೆಯನ್ನು ಸಹ ನೋಡಿಕೊಳ್ಳುವುದಾಗಿದೆ.

*ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮಗಳ ಅಡಿಯಲ್ಲಿ ECCE:*

ಪ್ರಾಥಮಿಕ ಶಾಲಾಶಿಕ್ಷಣದಲ್ಲಿ ಮಕ್ಕಳ ಹಿಡಿದಿಡುವಿಕೆಯನ್ನು ಉತ್ತೇಜಿಸುವ ಪ್ರಮುಖ ಅಂಶವಾಗಿ ECCE ಯ ಪ್ರಾಮುಖ್ಯತೆಯನ್ನು ಪರಿಗಣಿಸಿ, 1990ರ ಆರಂಭದಲ್ಲಿ ಶಿಕ್ಷಣ ಇಲಾಖೆಯು ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ (District Primary Education Program (DPEP)) ವನ್ನು ಬಾಹ್ಯ ನಿಧಿ ಸರಣಿಯ ಪ್ರಾಜೆಕ್ಟ್‌ಗಳ ಯೋಜನೆಯಲ್ಲಿ ಈ ಘಟಕವನ್ನು ಸೇರಿಸಿತು. DPEP ಅಡಿಯಲ್ಲಿನ ವಿಧಾನವು ICDS ಯೊಂದಿಗೆ ಒಮ್ಮುಖವಾದದ್ದಾಗಿತ್ತು. ಇದನ್ನು ಈ ಕೆಳಗಿನವುಗಳ ಮೂಲಕ ಕಲ್ಪಿಸಲಾಯಿತು: (a) ಆದಷ್ಟು ಮಟ್ಟಿಗೆ ICDS ಕೇಂದ್ರಗಳನ್ನು ಪ್ರಾಥಮಿಕ ಶಾಲೆಗಳಲ್ಲಿ ಪ್ರತಿಷ್ಠಾಪಿಸುವುದು; (b) ಹುಡುಗಿಯರ ಪಾಲ್ಗೊಳ್ಳುವಿಕೆಗೆ ಅನುವು ಮಾಡಿ ಕೊಡುವುದಕ್ಕಾಗಿ ಸಮಯವನ್ನು ಪ್ರಾಥಮಿಕ ಶಾಲೆಗಳೊಂದಿಗೆ ಏಕಕಾಲಿಕವಾಗಿಸುವುದು; (c) ECCE ಯಲ್ಲಿ ICDS ಸೇವೆ ಒದಗಿಸುವವರನ್ನು ತರಬೇತುಗೊಳಿಸುವುದು; ಮತ್ತು (d) ಮಕ್ಕಳಿಗೆ ಆಟದ ಸಾಮಗ್ರಿಗಳನ್ನು

ಒದಗಿಸುವುದು. ICDS ಸೇವೆ ಒದಗಿಸುವವರಿಗೆ ಅವರ ದೀರ್ಘಕಾಲೀನ ಕೆಲಸದ ಸಮಯಕ್ಕಾಗಿ DPEP ಬಜೆಟಿನಿಂದ ಸಂಭಾವನೆ ಒದಗಿಸಲಾಯಿತು. ICDS ಭೌತಿಕವಾಗಿ ಕಾರ್ಯಾಚರಿಸದ ಸ್ಥಳಗಳಲ್ಲಿ, ಅದೇ ಮಾದರಿಯಲ್ಲಿ ಹೊಸ ಕೇಂದ್ರಗಳನ್ನು ತೆರೆಯಲಾಯಿತು. ಶಾಲಾ ಸಿದ್ಧತೆಯನ್ನು ಪ್ರಾಥಮಿಕ ಪಠ್ಯಕ್ರಮದ ಆರಂಭಿಕ ಘಟಕವಾಗಿ ಪರಿಚಯಿಸುವ ಮೂಲಕ ಮತ್ತು ಒಂದನೇ ಹಾಗೂ ಎರಡನೇ ತರಗತಿಗಳಲ್ಲಿ ನಲಿ-ಕಲಿ ವಿಧಿ ವಿಧಾನಗಳನ್ನು ಮುಂದುವರಿಸುವ ಮೂಲಕ DPEP ಅಡಿಯಲ್ಲಿ ಶಾಲಾಪೂರ್ವ ಮತ್ತು ಪ್ರಾಥಮಿಕ ಶಾಲೆಯ ಕಾರ್ಯಕ್ರಮಗಳ ನಡುವೆ ಸಂಬಂಧ ಕಲ್ಪಿಸುವ ಮೂಲಕ ಯತ್ನಿಸಲಾಯಿತು. ECCE ಯಿಂದಾಗುವ ಪ್ರಯೋಜನಗಳನ್ನು ಪ್ರಾಥಮಿಕ ಶಾಲಾ ಶಿಕ್ಷಣದಲ್ಲಿ ಮಕ್ಕಳ ಸ್ವತಃ ಅವರ ಪೂರ್ವಸಿದ್ಧತೆ ಮಾತ್ರವಲ್ಲದೆ ಶಾಲೆಗೆ ಹೋಗುವುದಕ್ಕಾಗಿ ಹೆಣ್ಣು ಮಕ್ಕಳನ್ನು ಒಡಹುಟ್ಟಿದವರ ಆರೈಕೆಯ ಹೊರೆಯಿಂದ ಬಿಡುಗಡೆ ಮಾಡುವ ಸೇವೆಯನ್ನಾಗಿ ನೋಡಲಾಯಿತು. ಇದು ಹೀಗೆ, ICDS ಕೇಂದ್ರಗಳು ಇರುವಲ್ಲಿ, ICDS ಮೂಲಕ ECCE ಗಾಗಿ ಚಾಲ್ತಿಯಲ್ಲಿರುವ ಮುನ್ನೇರ್ಪಾಡುಗಳನ್ನು ಗಟ್ಟಿಗೊಳಿಸಲು ಮತ್ತು ಪ್ರಾಥಮಿಕ ಶಾಲೆಗಳೊಂದಿಗಿನ ಅವುಗಳ ಸಂಬಂಧವನ್ನು ಗಟ್ಟಿಗೊಳಿಸಲು ದಾರಿ ಮಾಡಿ ಕೊಟ್ಟಿತು. DPEP ಯ ಮೌಲ್ಯಮಾಪನ ಮಾಡಿದಾಗ, ECCE ಕೇಂದ್ರಗಳ ಜೊತೆಗೆ DPEP ಹೊಂದಿರುವ ರಾಜ್ಯಗಳಲ್ಲಿ ಹುಡುಗಿಯರ ದಾಖಲಾತಿ ಮತ್ತು ಶಾಲಾ ಹಾಜರಾತಿಯು, ಈ ಸೌಲಭ್ಯ ಇಲ್ಲದ ರಾಜ್ಯಗಳಿಗಿಂತ ಹೆಚ್ಚಿಗೆ ಇರುವುದು ಕಂಡುಬಂತು (Rao(ರಾವ್) & Sharma(ಶರ್ಮ), 2002). ಈ ಮೌಲ್ಯಮಾಪನದ ಪ್ರಕಾರ, ECCE ಗಾಗಿ ಇರುವ DPEP ಶಾಲಾ ಆಧಾರಿತ ಮಾದರಿಯು ಮಕ್ಕಳಿಗೆ ಉತ್ತೇಜಕ ಶೈಕ್ಷಣಿಕ ವಾತಾವರಣವನ್ನು ಒದಗಿಸುವ ಮತ್ತು ಮಕ್ಕಳನ್ನು ಶಾಲೆಯಲ್ಲಿ ಉಳಿಸಿಕೊಳ್ಳಲು ಉತ್ತೇಜನ ನೀಡುವ ಶಾಲೆಯೊಂದಿಗಿನ 'ಬಾಂಧವ್ಯ' ವನ್ನು ರೂಪಿಸುವಲ್ಲಿ ಹೆಚ್ಚು ಪರಿಣಾಮಕಾರಿ ಎನಿಸಿತು. ದುರದೃಷ್ಟವಶಾತ್ DPEP ಯೋಜನೆಯೊಂದನ್ನು ಹೊರತುಪಡಿಸಿ ಉಳಿದೆಲ್ಲವೂ ಇನ್ನೂ ಅನುಷ್ಠಾನದ ಹಂತದಲ್ಲಿರುವುದರಿಂದ, ಈ ಪರಿಣಾಮಕಾರಿ ಒಮ್ಮುಖ ಮಾದರಿಯ ಸುಸ್ಥಿರತೆಯ ಕುರಿತು ಗಂಭೀರ ಸಂದೇಹಗಳಿವೆ.

ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವುದಕ್ಕಾಗಿ ಭಾರತ ಸರ್ಕಾರದ (GOI) ಮುಂಚೂಣಿಕಾರ್ಯಕ್ರಮ ಎನಿಸಿರುವ ಹಾಗೂ DPEP ಯ ನಂತರದ ಕಾರ್ಯಕ್ರಮ ಎನಿಸಿದ *ಸರ್ವ ಶಿಕ್ಷಾ ಅಭಿಯಾನ (SSA)* ವು ದುರದೃಷ್ಟವಶಾತ್ DPEP ಯ ECCE ಘಟಕವನ್ನು ಸಂಪೂರ್ಣವಾಗಿ ಸೇರಿಸಿಕೊಳ್ಳಲಿಲ್ಲ. ಬದಲಾಗಿ ಇದು ಪ್ರತಿ ಜಿಲ್ಲೆಗೆ ECCE ಗೆ ಸೀಮಿತ 'ನಾವಿನ್ಯತೆಗಳ ಅನುದಾನ'ವನ್ನು ಒದಗಿಸಿತು. ಇದು ಸೇವೆಯ ಪ್ರಮಾಣವನ್ನು ಹಿಗ್ಗಿಸಲು ಅನುವು ಮಾಡಿಕೊಡಲಿಲ್ಲ. ಕಾರ್ಯಕ್ರಮದಿಂದ ಇದರ ಹೊರಗಿಡುವಿಕೆಯ ಹಿಂದಿನ ಕಾರಣ ಸ್ಪಷ್ಟವಾಗಿ ತಿಳಿಯದೆ ಇದ್ದರೂ, DPEP ಅಡಿಯಲ್ಲಿ ಉಂಟಾಗಿರುವ ಸಕಾರಾತ್ಮಕ ಪರಿಣಾಮವನ್ನು ನೋಡಿದಾಗ ಇದೊಂದು ದುರದೃಷ್ಟಕಾರಿ ಹೊರಗಿಡುವಿಕೆಯಾಗಿ ತೋರುತ್ತದೆ. ಪ್ರಾಥಮಿಕ ಶಿಕ್ಷಣವನ್ನು ಮೂಲಭೂತ ಹಕ್ಕಾಗಿ ಮಾಡುವುದಕ್ಕಾಗಿ ರಾಷ್ಟ್ರೀಯ ಸಂಸತ್ತು ಇತ್ತೀಚೆಗೆ ಜಾರಿಗೊಳಿಸಿದ ಶಾಸನವು 6 ವರ್ಷಗಳಿಗಿಂತ ಕೆಳಗಿನ ಮಕ್ಕಳನ್ನು ಹೊರಗೆ ಇಟ್ಟಿರುವುದು ಒಂದು ಸಂಭಾವ್ಯ ಕಾರಣವಾಗಿರಬಹುದು ಮತ್ತು ಆದ್ದರಿಂದ ಇದು ಕೇವಲ 6-14 ವಯಸ್ಸಿನ ಮಕ್ಕಳಿಗೆ ಮಾತ್ರ ನ್ಯಾಯಾಧೀನವಾದ ರಾಷ್ಟ್ರೀಯ ಬದ್ಧತೆ ಎನಿಸುತ್ತದೆ. ಆದಾಗ್ಯೂ, ಭಾರತ ಸರ್ಕಾರವು ಇತ್ತೀಚೆಗೆ ಮುಖ್ಯವಾಗಿ ಹಿಂದುಳಿದ ಆಡಳಿತಾತ್ಮಕ ಕ್ಷೇತ್ರಗಳಿಗಾಗಿ SSA ಯೋಜನೆಯ ಅಡಿಯಲ್ಲಿ ಪ್ರಾಥಮಿಕ ಮಟ್ಟದಲ್ಲಿ ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ರಾಷ್ಟ್ರೀಯ ಕಾರ್ಯಕ್ರಮ (National Programme for Education of Girls at Elementary Level (NPEGEL)) ವನ್ನು ಜಾರಿಗೆ ತಂದಿತು. ಪ್ರಾಥಮಿಕ ಶಿಕ್ಷಣದಲ್ಲಿ ಹೆಣ್ಣು ಮಕ್ಕಳ ಪಾಲ್ಗೊಳ್ಳುವಿಕೆಗೆ ಅನುವು ಮಾಡಿ ಕೊಡುವುದಕ್ಕಾಗಿ ಕ್ಲಸ್ಟರ್ ಮಟ್ಟದಲ್ಲಿ ಮಕ್ಕಳ ಆರೈಕೆ ಕೇಂದ್ರಗಳನ್ನು ತೆರೆಯುವುದಕ್ಕಾಗಿ ಈ ಕಾರ್ಯಕ್ರಮದ ಅಡಿಯಲ್ಲಿ ಮುನ್ನೇರ್ಪಾಡನ್ನು ಮಾಡಲಾಗಿದೆ.

*ಮಹಿಳಾ ಸಮಾಖ್ಯ ಯೋಜನೆ* ಎನ್ನುವುದು ಗ್ರಾಮೀಣ ಪ್ರದೇಶದ ಮಹಿಳೆಯರ ಶಿಕ್ಷಣ ಮತ್ತು ಸಬಲೀಕರಣಕ್ಕಾಗಿ ಇರುವ ಕಾರ್ಯಕ್ರಮವಾಗಿದೆ. ಇದು ಮುಖ್ಯವಾಗಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಅಂಚಿಗೆ ದೂಡಲ್ಪಟ್ಟ ಮಹಿಳೆಯರನ್ನು ಗುರಿಯಾಗಿಸಿದೆ. ಈ ಕಾರ್ಯಕ್ರಮದ ಅಡಿಯಲ್ಲಿ, ಅಗತ್ಯಕ್ಕೆ ಅನುಗುಣವಾಗಿ ಹಳ್ಳಿಗಳಲ್ಲಿ ECCE ಕಾರ್ಯಕ್ರಮಗಳನ್ನು ತೆಗೆದುಕೊಳ್ಳಲಾಗಿದೆ. ಮಾನವ ಅಭಿವೃದ್ಧಿ ಮತ್ತು ಕೌಟುಂಬಿಕ ಅಧ್ಯಯನಗಳ ಇಲಾಖೆ, ಎಂ.ಎಸ್ ವಿಶ್ವವಿದ್ಯಾಲಯ, ವಡೋದರಾ – ಇಲ್ಲಿ ಅಭಿವೃದ್ಧಿಪಡಿಸಲಾದ ನಿರ್ದಿಷ್ಟ ವಿಷಯ ಘಟಕಗಳ (modules) ಮೂಲಕ ಸಂಪನ್ಮೂಲ ವ್ಯಕ್ತಿಗಳು ಮಕ್ಕಳ ಆರೈಕೆ ಕಾರ್ಯಕರ್ತರಿಗೆ ತರಬೇತಿಯನ್ನು ನೀಡುತ್ತಿದ್ದಾರೆ (ಭಾರತ ಸರ್ಕಾರ, 2003).

ಈಗ ನಿಂತು ಹೋಗಿರುವ *ಜನಶಾಲಾ* (ಭಾರತ ಸರ್ಕಾರ – ವಿಶ್ವಸಂಸ್ಥೆ) ಕಾರ್ಯಕ್ರಮವು, ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣವನ್ನು ಸಾಧಿಸುವುದಕ್ಕಾಗಿ ಚಾಲ್ತಿಯಲ್ಲಿರುವ ಪ್ರಯತ್ನಗಳಿಗೆ ಕಾರ್ಯಕ್ರಮದ ನೆರವು ಒದಗಿಸುವುದಕ್ಕಾಗಿ ಭಾರತ ಸರ್ಕಾರ ಮತ್ತು ವಿಶ್ವಸಂಸ್ಥೆಯ ಐದು ಸಂಸ್ಥೆಗಳ (UNDP, UNICEF, UNESCO, ILO ಮತ್ತು UNFPA) ಸಹಯೋಗದಿಂದ ನಡೆದ ಕಾರ್ಯಕ್ರಮವಾಗಿತ್ತು. ಮಕ್ಕಳ ಕಲಿಕೆ ಮತ್ತು ಅಭಿವೃದ್ಧಿಯನ್ನು ಸುಧಾರಿಸುವುದಕ್ಕಾಗಿ ಶಾಲಾಪೂರ್ವದ ಶಿಕ್ಷಣವು ಅಗತ್ಯ ಘಟಕವಾಗಿದೆ ಎಂದು ಈ ಕಾರ್ಯಕ್ರಮವು ಸಾಬೀತುಪಡಿಸಿತು ಹಾಗೂ DPEP ಅಡಿಯಲ್ಲಿ ಇರುವ ಒಮ್ಮುಖ ಮಾದರಿಯಂತೆಯೇ ECCE ಕೇಂದ್ರಗಳನ್ನು ತೆರೆಯಲಾಯಿತು. ECCE ಕೇಂದ್ರಗಳನ್ನು ಸ್ಥಾಪಿಸಲು ಮತ್ತು ನಿರ್ವಹಿಸಲು ಮಹಿಳಾ ಪಂಗಡಗಳನ್ನು ಸಂಘಟಿಸಲಾಯಿತು. ಈ ಕೇಂದ್ರಗಳನ್ನು ಮಹಾರಾಷ್ಟ್ರ, ರಾಜಸ್ಥಾನ, ಆಂಧ್ರ ಪ್ರದೇಶ ಮತ್ತು ಒಡಿಶಾದಲ್ಲಿ ಸ್ಥಾಪಿಸಲಾಯಿತು. ಇಂತಹ ಕೇಂದ್ರಗಳನ್ನು ದೊಡ್ಡ ಸಂಖ್ಯೆಯಲ್ಲಿ, ಮೂಲಭೂತವಾಗಿ ಬುಡಕಟ್ಟು ಪ್ರದೇಶಗಳಲ್ಲಿ ಸಮುದಾಯದ ಬೇಡಿಕೆಯ ಮೇರೆಗೆ ಸ್ಥಾಪಿಸಲಾಯಿತು. ಇದರ ಪರಿಣಾಮವಾಗಿ ಶಾಲೆಗಳಲ್ಲಿ ಹೆಣ್ಣು ಮಕ್ಕಳ ಹಾಜರಾತಿಯಲ್ಲಿ ಹೆಚ್ಚಳ ಉಂಟಾಯಿತು (ಭಾರತ ಸರ್ಕಾರ, 2003). ಆದರೆ, ಈ ಕಾರ್ಯಕ್ರಮವನ್ನು ನಿಲ್ಲಿಸಿರುವ ಕಾರಣ ಈ ಕೇಂದ್ರಗಳ ಸ್ಥಿರತೆಯ ಕುರಿತು ಅನಿಶ್ಚಿತತೆ ಇದೆ.

ಈ ಎಲ್ಲಾ ನವೀನ ಉಪಕ್ರಮಗಳು ಮುಖ್ಯವಾಗಿ ಪ್ರಾಥಮಿಕ ಶಾಲೆಯೊಂದಿಗೆ ಸಹಯೋಗವನ್ನು ಬಲಪಡಿಸುವ ಮೂಲಕ ECE ಯಲ್ಲಿ ಕೆಲವೊಂದು ಉತ್ತಮ ಕಾರ್ಯರೀತಿಗಳನ್ನು ತೋರಿಸಿವೆ. ಈ ಮಾದರಿಯು, ಶಾಲೆಗಳಲ್ಲಿ ಹಿರಿಯ ಹೆಣ್ಣು ಮಕ್ಕಳ ಪಾಲ್ಗೊಳ್ಳುವಿಕೆ ಮತ್ತು ಉತ್ತಮ ECCE ವಾತಾವರಣದ ಸೃಷ್ಟಿಯ ವಿಚಾರದಲ್ಲಿ ಹೆಚ್ಚು ಅನುಕೂಲಕರವಾಗಿ ಕಂಡರೂ, ಈ ಕೇಂದ್ರವು ಜನವಸತಿಯ ಸ್ಥಳದಿಂದ ದೂರವಿರುವುದು ಇದರ ಅನನುಕೂಲತೆ ಎನಿಸಿದೆ. ಹೀಗಾಗಿ ಆರೋಗ್ಯ ಮತ್ತು ಪೌಷ್ಠಿಕಾಂಶದ ಕುರಿತು ಅರಿವು ಮೂಡಿಸುವ ವಿಚಾರದಲ್ಲಿ ತಾಯಂದಿರು ಮತ್ತು 3 ವರ್ಷ ವಯಸ್ಸಿನ ಕೆಳಗಿನ ಮಕ್ಕಳೊಂದಿಗಿನ ಕೆಲಸವನ್ನು ವಿಸ್ತರಿಸಲು ತಡೆ ಉಂಟಾಗಿದೆ. ಶಾಲೆ ಆಧಾರಿತ ಮಾದರಿಯ ವರ್ಧನೆಯು ಸಹ ಒಂದು ಸಮಸ್ಯೆಯಾಗಿ ಪರಿಣಮಿಸಿದೆ. ಅನೇಕ ಅಂಶಗಳು ಇದಕ್ಕೆ ತಡೆಯೊಡ್ಡಿದರೂ, ಮಾನವ ಮತ್ತು ಹಣಕಾಸು ಸಂಪನ್ಮೂಲಗಳ ತೀವ್ರ ಕೊರತೆಯ ಕಾರಣ ರಾಜ್ಯಗಳಿಗೆ ಹೆಚ್ಚುವರಿ ಹೊರೆಯನ್ನು ಹೊರಲು ಸಾಧ್ಯವಾಗದೆ ಇದ್ದುದು ಇದರಲ್ಲಿನ ಪ್ರಮುಖ ಕಾರಣವಾಗಿದೆ.

## ಸ್ವಯಂಸೇವಾ/ NGO ಉಪಕ್ರಮಗಳು

ಸ್ವಯಂಪ್ರೇರಿತ ಮತ್ತು ಸರ್ಕಾರೇತರ ಸಂಸ್ಥೆಗಳು ಒದಗಿಸುವ ECCE ಸೇವೆಗಳು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ಪ್ರದೇಶಗಳಲ್ಲಿ ಎಲ್ಲಾ ವಯಸ್ಸುಗಳ

ಮಕ್ಕಳಿಗೆ ಶಿಕ್ಷಣ ನೀಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ. ಈ ಸಂಸ್ಥೆಗಳು ಪ್ರಾಥಮಿಕವಾಗಿ ಬುಡಕಟ್ಟು ಜನರು, ವಲಸಿಗ ಕಾರ್ಮಿಕರು ಮತ್ತು ನಿರ್ದಿಷ್ಟ ಸನ್ನಿವೇಶಗಳಲ್ಲಿ ಗ್ರಾಮೀಣ ಪ್ರದೇಶದ ಮಕ್ಕಳು ಹೀಗೆ ಕಷ್ಟಕರ ಪರಿಸ್ಥಿತಿಯಲ್ಲಿರುವ ವಿಶೇಷ ಸಮುದಾಯಗಳ ಜೊತೆ ಕೆಲಸ ಮಾಡುತ್ತವೆ. ಸ್ಥಳೀಯ ಸಂಪನ್ಮೂಲಗಳನ್ನು ಬಳಸುವ ಮೂಲಕ ಅವು ಬಾಲವಾಡಿಗಳು ಮತ್ತು ECCE ಕೇಂದ್ರಗಳನ್ನು ನಡೆಸುತ್ತವೆ. ಕೆಲವು ಸರ್ಕಾರೇತರ ಸಂಸ್ಥೆಗಳು ಸಂಚಾರಿ ಬಾಲವಾಡಿಗಳನ್ನು ನಡೆಸುತ್ತವೆ. ಕಟ್ಟಡ ನಿರ್ಮಾಣ ಕಾರ್ಮಿಕರು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುವಾಗ ಈ ಬಾಲವಾಡಿಗಳು ಸಹ ಸ್ಥಳಾಂತರಗೊಳ್ಳುತ್ತವೆ. ಈ ಕಾರ್ಯಕ್ರಮಗಳ ಪರಿಣಾಮಕಾರಿತ್ವವನ್ನು ವ್ಯವಸ್ಥಿತವಾಗಿ ಮೌಲ್ಯಮಾಪನಕ್ಕೆ ಒಳಪಡಿಸದೆ ಇದ್ದರೂ, ಇವುಗಳಿಗೆ ಹಾಜರಾಗುವ ಮಕ್ಕಳು ಪ್ರಾಥಮಿಕ ಶಾಲೆಗಳಿಗೆ ಕಾಲಿಡುವ ಸಾಧ್ಯತೆ ಹೆಚ್ಚು ಹಾಗೂ ಪೋಷಕರು ಸಾಮಾನ್ಯವಾಗಿ ಸಕಾರಾತ್ಮಕ ಫಲಿತಾಂಶಗಳನ್ನು ವರದಿ ಮಾಡಿದ್ದಾರೆ (Swaminathan (ಸ್ವಾಮಿನಾಥನ್), 1998). ಕೆಲವು ಸರ್ಕಾರೇತರ ಸಂಸ್ಥೆಗಳು ವಿನ್ಯಾಸಗೊಳಿಸಿದ ಕಾರ್ಯಕ್ರಮಗಳು (ರುಚಿಕಾ, ಸೇವಾ, ನೂತನ್ ಬಾಲ್ ಸಂಘ ಇತ್ಯಾದಿಗಳು ನಡೆಸುವ) ವಿವಿಧ ಸಮುದಾಯಗಳ ಮಕ್ಕಳ ಆರೈಕೆಯ ಅಗತ್ಯತೆಗಳನ್ನು ಪೂರೈಸುವ ವಿಚಾರದಲ್ಲಿ ಯಶಸ್ವಿ ವಿಧಿ ವಿಧಾನಗಳನ್ನು ತೋರ್ಪಡಿಸಿವೆ. ಕಳೆದ ಕೆಲವು ವರ್ಷಗಳಲ್ಲಿ, ಕಡಿಮೆ ವೆಚ್ಚದ ನಗರ ಮಾದರಿಯ ಮೂಲಕ ಸುಮಾರು 90,000 ಮಕ್ಕಳನ್ನು ಒಳಗೊಂಡು 12 ರಾಜ್ಯಗಳಲ್ಲಿ ತನ್ನ ಉಪಸ್ಥಿತಿಯನ್ನು ಸಾಧಿಸುವ ಮೂಲಕ '*ಪ್ರಥಮ್*' ಸಂಸ್ಥೆಯು ಪ್ರಮುಖ ಸರ್ಕಾರೇತರ ಸಂಸ್ಥೆಯಾಗಿ ಹೊರಹೊಮ್ಮಿದೆ. ಈ '*ಬಾಲವಾಡಿ*' ಗಳಲ್ಲದೆ ಶಾಲಾ ಪೂರ್ವಸಿದ್ಧತೆ ಕಾರ್ಯಕ್ರಮವನ್ನು '*ಪ್ರಥಮ್*' ಸಂಸ್ಥೆಯು ಮೂರು ರಾಜ್ಯಗಳಲ್ಲಿ ಪ್ರಾರಂಭಿಸಿದೆ. ಈ ಸರ್ಕಾರೇತರ ಸಂಸ್ಥೆಗಳಿಗೆ ಸರ್ಕಾರ, ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ದಾನಿ ಸಂಸ್ಥೆಗಳು ನಿಧಿಯನ್ನು ಒದಗಿಸುತ್ತವೆ. ಇಷ್ಟೇ ಅಲ್ಲದೆ, ಕೆಲವು ವಿಶ್ವವಿದ್ಯಾಲಯಗಳು ಮುಖ್ಯವಾಗಿ ತಮ್ಮ ಮಕ್ಕಳ ಅಭಿವೃದ್ಧಿ ಇಲಾಖೆಯ ಅಡಿಯಲ್ಲಿ ಶಿಶುಪಾಲನಾ ಪ್ರಯೋಗಾಲಯ ಶಾಲೆ (Laboratory Nursery Schools)ಗಳನ್ನು ಹೊಂದಿವೆ. ಈ ಶಾಲಾಪೂರ್ವ ಶಾಲೆಗಳ ಪಠ್ಯಕ್ರಮವು ಸಾಮಾನ್ಯವಾಗಿ ಹೆಚ್ಚು ನವೀನ ಮತ್ತು ಬೆಳವಣಿಗೆಯ ದೃಷ್ಟಿಯಿಂದ ಸೂಕ್ತ ಎನಿಸುತ್ತದೆ. ಅನೇಕ ಧಾರ್ಮಿಕ ಪಂಗಡಗಳು ಸಹ ಕೆಲವೊಂದು ಶಾಲಾಪೂರ್ವ ಶಾಲೆಗಳನ್ನು ನಡೆಸುತ್ತವೆ. ಈ ಶಾಲಾಪೂರ್ವ ಶಾಲೆಗಳು, ಖಾಸಗಿ ಶಾಲಾಪೂರ್ವ ಶಾಲೆಗಳಿಗೆ ತಕ್ಕಮಟ್ಟಿಗೆ ಸ್ಪರ್ಧೆಯೊಡ್ಡುವ ಸಾಮರ್ಥ್ಯವನ್ನು ಹೊಂದಿವೆ.

## ಖಾಸಗಿ ಉಪಕ್ರಮಗಳು

ಇಲ್ಲಿ ಖಾಸಗಿ ಉಪಕ್ರಮವೆಂದರೆ ECCE ಯಲ್ಲಿ ಶುಲ್ಕವನ್ನು ವಿಧಿಸುವ/ ಲಾಭ ಗಳಿಸುವ ಉಪಕ್ರಮವಾಗಿದೆ. ಎಲ್ಲಾ ಕಡೆ ಇರುವಂತೆಯೇ, ಭಾರತದಲ್ಲಿಯೂ ECCE ಯಲ್ಲಿ ದ್ವಿವಿಧ ವಿಧಾನಗಳಿವೆ. ಸರ್ಕಾರಿ ಕಾರ್ಯಕ್ರಮದ ICDS, ಅನನುಕೂಲತೆಗೆ ಒಳಗಾದ ಸಮುದಾಯಗಳಿಗೆ ಸೇವೆಯನ್ನು ನೀಡಿದರೆ, ಖಾಸಗಿ ಉಪಕ್ರಮಗಳು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಮುಂದುವರಿದಿರುವ ಕುಟುಂಬಗಳ ಮಕ್ಕಳನ್ನು ಗುರಿಯಾಗಿಸಿವೆ. ಇವು ಖಾಸಗಿ ಶಾಲೆಗಳಲ್ಲಿನ ಶಿಶುಪಾಲನ ಕೇಂದ್ರಗಳು (nurseries), ಶಿಶುವಿಹಾರ (kindergarten) ಮತ್ತು ಪೂರ್ವ ಪ್ರಾಥಮಿಕ ತರಗತಿಗಳ ಮೂಲಕ ಶಾಲಾಪೂರ್ವ ಶಿಕ್ಷಣವನ್ನು ಒದಗಿಸುತ್ತವೆ. ನಿಖರ ಅಂಕಿಅಂಶಗಳು ಲಭ್ಯವಿಲ್ಲದೆ ಇದ್ದರೂ ಸುಮಾರು 10 ಮಿಲಿಯ ಮಕ್ಕಳು ಖಾಸಗಿ ಮಾಲೀಕತ್ವದ ಕಾರ್ಯಕ್ರಮಗಳಿಂದ ECCE ಯನ್ನು ಪಡೆಯುತ್ತವೆ ಎಂದು ಅಂದಾಜಿಸಲಾಗಿದೆ (Sharma(ಶರ್ಮ), 1998, UNESCO ಸಂಸ್ಥೆಯಲ್ಲಿ ಉಲ್ಲೇಖಿಸಿದಂತೆ, 2006).

ಈ ಪ್ರಕಾರದ ಶಾಲಾಪೂರ್ವ ಶಾಲೆಗೆ ಲಭ್ಯತೆಗಿಂತಲೂ ಹೆಚ್ಚಿನ ಬೇಡಿಕೆ ಇದೆ ಹಾಗೂ ಪ್ರಮುಖ ಶಾಲೆಗಳಲ್ಲಿ ಯಾವ ರೀತಿಯ ಬೇಡಿಕೆ ಇದೆ ಎಂದರೆ ಒಂದು ಸ್ಥಾನಕ್ಕೆ ಸುಮಾರು 300 ವಿದ್ಯಾರ್ಥಿಗಳು ಸ್ಪರ್ಧಿಸುತ್ತಾರೆ (Prochner (ಪ್ರಚ್ನ್ಯರ್), 2002). ಈ ವಿದ್ಯಮಾನವು ಕುಲೀನ ವರ್ಗದವರಿಗೆ ಮಾತ್ರವೇ ಸೀಮಿತವಾಗಿಲ್ಲ. ಗ್ರಾಹಕ ವರ್ಗದ ಬೆಳವಣಿಗೆಯಿಂದಾಗಿ ಬೂರ್ಜ್ವಾ ಕ್ರಾಂತಿಗೆ ಇದು ಕಾರಣವಾಗಿದೆ ಹಾಗೂ ಹೆಚ್ಚಿನ ಪೋಷಕರಿಗೆ ತಮ್ಮ ಮಕ್ಕಳಿಗಾಗಿ ಶಾಲಾಪೂರ್ವದ ಶಾಲೆಯ ಅನುಭವವನ್ನು ಗಿಟ್ಟಿಸಿಕೊಳ್ಳಲು ಸಾಧ್ಯವಾಗಿದೆ (Stern (ಸ್ಟರ್ನ್), 1993). ತಮಿಳುನಾಡಿನಲ್ಲಿ ನಡೆಸಿದ ಒಂದು ಅಧ್ಯಯನದ ಪ್ರಕಾರ, ಕಡಮೆ ಆದಾಯದ ಸಮುದಾಯಗಳಿಗೆ ಸೇರಿದ ನಗರ ಪ್ರದೇಶಗಳ ಪೋಷಕರು ಸಹ ತಮ್ಮ ಮಕ್ಕಳು 4ನೇ ವಯಸ್ಸಿಗೆ ಕಾಲಿಟ್ಟಾಗ ಅವರಿಗೆ ಖಾಸಗಿ ಶಾಲಾಪೂರ್ವ ಶಾಲೆಗಳಲ್ಲಿ ದಾಖಲಾತಿ ಪಡೆಯಲು ಯತ್ನಿಸಿದ್ದಾರೆ (M.S Swaminathan Research Foundation (ಎಂ.ಎಸ್ ಸ್ವಾಮಿನಾಥನ್ ಸಂಶೋಧನಾ ಪ್ರತಿಷ್ಠಾನ), 2000). ECCE ಕುರಿತು ಭಾರತ ಸರ್ಕಾರವು ನೇಮಿಸಿದ ಸಮಿತಿಯು, "ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಮೇಲ್ಮುಖವಾಗಿ ಚಲಿಸುತ್ತಿರುವ ಕುಟುಂಬಗಳು ಆಗಾಗ್ಗೆ ಸಾರ್ವಜನಿಕ ಉಪಕ್ರಮಗಳನ್ನು ಆಯ್ಕೆ ಮಾಡದೆ ಸ್ಥಳೀಯವಾಗಿ ಲಭ್ಯವಿರುವ ಬದಲಿ ವ್ಯವಸ್ಥೆಯಾದ ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಒಲವು ತೋರುತ್ತಿವೆ" (ಭಾರತ ಸರ್ಕಾರ, 2007:18) ಎಂದು ವರದಿ ಮಾಡಿದೆ. ECCE ಹಂತದಲ್ಲಿ ಯಾವುದೇ ನಿಯಂತ್ರಣ ಅಥವಾ ನೋಂದಣಿ ವ್ಯವಸ್ಥೆಯ ಅನುಪಸ್ಥಿತಿಯ ಕಾರಣ ಈ ಕಾರ್ಯಕ್ರಮಗಳು ನೀಡುವ ಶಿಕ್ಷಣವು ವಿಸ್ತೃತ ಶ್ರೇಣಿಯದ್ದಾಗಿವೆ. ಇವುಗಳಲ್ಲಿ ಕೆಲವು ಶಾಲಾಪೂರ್ವ ಶಾಲೆಗಳು 'ಬೋಧನಾ ಅಂಗಡಿ'ಗಳಾಗಿದ್ದು ಮಕ್ಕಳ ಬೆಳವಣಿಗೆಯ ಮಾನದಂಡಗಳನ್ನು ಗೌರವಿಸುವುದಿಲ್ಲ/ಪರಿಗಣಿಸುವುದಿಲ್ಲ. ಕೆಲವೊಂದು ಸನ್ನಿವೇಶಗಳಲ್ಲಿ ನೀಡಲಾಗುವ ಗುಣಮಟ್ಟವು ಮಕ್ಕಳ ಬೆಳವಣಿಗೆಯ ದೃಷ್ಟಿಯಿಂದ ವ್ಯತಿರಿಕ್ತ ಪರಿಣಾಮವನ್ನು ಬೀರಬಹುದು ಹಾಗೂ ಇದನ್ನು 'ತಪ್ಪಾದ ಶಿಕ್ಷಣ' ಎಂದು ಸಹ ವಿವರಿಸಬಹುದು (Kaul (ಕೌಲ್), 1998).

**ವಿಭಾಗ – V**

# ECCE ಸೇವೆಗಳ ವ್ಯಾಪ್ತಿ

**ನಕಾಶೆ 5.1**

**ECE ಮುನ್ನೇರ್ಪಾಡು: 2002-2006 ರಿಂದ ಹೆಚ್ಚಳ**




*ದಶಲಕ್ಷಗಳಲ್ಲಿ * 2002 *2006

ಒಟ್ಟು ECE ಮುನ್ನೇರ್ಪಾಡು

ಅಂಗನವಾಡಿ ಕೇಂದ್ರಗಳ ಸಂಖ್ಯೆ

*ಲಭ್ಯತೆ:*

ಲಭ್ಯ ದ್ವಿತೀಯಕ ದತ್ತಾಂಶದ ವಿಶ್ಲೇಷಣೆಯ ಪ್ರಕಾರ, ದೇಶದಲ್ಲಿ ಸುಮಾರು ಒಂದು ಮಿಲಿಯದಷ್ಟು ಸಂಸ್ಥೆಗಳು 3-6 ವರ್ಷ ವಯಸ್ಸಿನ ಮಕ್ಕಳಿಗೆ ECCE ಯನ್ನು ಒದಗಿಸುತ್ತಿವೆ. ICDS ಕೇಂದ್ರಗಳ ಸಂಖ್ಯೆಯು 2002ರಲ್ಲಿ ಐದು ಲಕ್ಷದ ನಲ್ವತ್ತಾರು ಸಾವಿರ ಆಗಿದ್ದರೆ, 2006ರಲ್ಲಿ ಇದು ಏಳು ಲಕ್ಷದ ಅರುವತ್ತೇಳು ಸಾವಿರಕ್ಕೆ ತಲುಪಿದೆ. ಇದೇ ವೇಳೆ ಖಾಸಗಿ ವಲಯದ ECCE ಗಳ ಸಂಖ್ಯೆಯು 2002ರಲ್ಲಿ 65 ಸಾವಿರಕ್ಕಿಂತಲೂ ಕಡಮೆ ಇದ್ದರೆ, 2006ರಲ್ಲಿ ಇದು ಎರಡು ಲಕ್ಷದ ಇಪ್ಪತ್ತೆರಡು ಸಾವಿರಕ್ಕೆ ತಲುಪಿದ್ದು, ಮೂರು ಪಟ್ಟುಗಿಂತಲೂ ಮಿಗಿಲಾದ ಹೆಚ್ಚಳವನ್ನು ದಾಖಲಿಸಿದೆ. ಆದರೂ, ಕೈಗೊಳ್ಳಲಾದ ಒಂದು ಕೇಂದ್ರ ಸಮೀಕ್ಷೆ ಪ್ರಕ್ರಿಯೆಯ ಆಧಾರದ ಪ್ರಕಾರ, 2006ರಲ್ಲಿ ಪ್ರತಿ 100 ಚದರ ಕಿಲೋಮೀಟರ್ ಗಳಿಗೆ ಕೇವಲ 30 ECCE ಕೇಂದ್ರಗಳಿದ್ದವು ಹಾಗೂ ಪ್ರತಿ 1000 ಜನಸಂಖ್ಯೆಗೆ 12ಕ್ಕಿಂತ ಕಡಮೆ ECE ಕೇಂದ್ರಗಳಿದ್ದವು ಎಂದು ಕಂಡುಬಂದಿತು.

ಒಂದು ಮಿಲಿಯದಲ್ಲಿ 7,66,681 ಕೇಂದ್ರಗಳು ICDS ಅಡಿಯಲ್ಲಿದ್ದರೆ, 2,22,243 ಕೇಂದ್ರಗಳು ಪ್ರಾಥಮಿಕ ಶಾಲೆಗಳ ಜೊತೆ ಇವೆ; 93.8 ಶೇಕಡಾ ಕೇಂದ್ರಗಳು ಸಾರ್ವಜನಿಕ ವಲಯದಲ್ಲಿದ್ದರೆ

ಕೇವಲ 6.2 ಕೇಂದ್ರಗಳು ಖಾಸಗಿ ವಲಯದಲ್ಲಿವೆ (IMRB, 2007). ಸಾರ್ವಜನಿಕ ವಲಯದಲ್ಲಿನ ದೊಡ್ಡ ಸಂಖ್ಯೆಯು ICDS ನ ಕೊಡುಗೆಯಾಗಿದೆ. ನಗರ – ಗ್ರಾಮೀಣ ಹಂಚಿಕೆಯ ವಿಚಾರದಲ್ಲಿ ಹೇಳುವುದಾದರೆ, 96.3 ಶೇಕಡಾ ಕೇಂದ್ರಗಳು ಗ್ರಾಮೀಣ ಪ್ರದೇಶಗಳಲ್ಲಿದ್ದರೆ ಕೇವಲ 3.7 ಶೇಕಡಾ ಕೇಂದ್ರಗಳು ನಗರ ಪ್ರದೇಶಗಳಲ್ಲಿದ್ದು, ICDS ಸೇರಿದಂತೆ ಮಕ್ಕಳ ಕಾರ್ಯಕ್ರಮಗಳಿಗಾಗಿ *‘ನಗರ ಕಾರ್ಯತಂತ್ರ’* ವೊಂದರ ಅಗತ್ಯತೆಯನ್ನು ಇದು ಒತ್ತಿ ಹೇಳಿದೆ.

| **ಕಾರ್ಯಕ್ರಮಗಳು** | **ಕೇಂದ್ರಗಳ ಸಂಖ್ಯೆ** | **ಫಲಾನುಭವಿಗಳ ವ್ಯಾಪ್ತಿ** |
|---|---|---|
| ICDS | 766,681 | 23 ಮಿಲಿಯ |
| ದುಡಿಯುತ್ತಿರುವ ತಾಯಂದಿರ ಮಕ್ಕಳಿಗಾಗಿ ರಾಜೀವ್ ಗಾಂಧಿ ರಾಷ್ಟ್ರೀಯ ಬಾಲವಾಡಿ ಯೋಜನೆ | 22038* | 0.55 ಮಿಲಿಯ @ |
| ಪೂರ್ವ ಪ್ರಾಥಮಿಕ ವಿಭಾಗ ಹೊಂದಿರುವ ಶಾಲೆಗಳು | 222,243♥ | (1,94,000) ಸರಿಸುಮಾರು 0.2 ಮಿಲಿಯ |
| ECCE ಗಾಗಿ NGO ಸೇವೆಗಳು | | 3-20 ಮಿಲಿಯ ದ ತನಕ ವ್ಯತ್ಯಯಗೊಳುತ್ತದೆ ** |
| EEB ಯಲ್ಲಿ ICDS ರಹಿತ ಬಾಲವಾಡಿಗಳು | | 1.74 ಮಿಲಿಯ |
| ಖಾಸಗಿ ಉಪಕ್ರಮಗಳು | 60, 969♥ | ಸರಿಸುಮಾರು 10 ಮಿಲಿಯ (2002)** |

ಮೂಲ: IMRB (2007)

* Early Childhood Care and Education – An Overview (ಭಾರತ ಸರ್ಕಾರ, 2003)

** Seventh All India Educational Survey, as on Sep.2002 (NCERT, 2005)

♥ಮೆಹ್ತಾ (2007)

*ದಾಖಲಾತಿಗಳು:*

ವಿವಿಧ ಮೂಲಗಳಿಂದ ಪಡೆದ ದತ್ತಾಂಶದಲ್ಲಿ ಅಸಂಗತತೆ ಇರುವುದರಿಂದ ಯಾವುದೇ ECCE ಸೌಲಭ್ಯ ಪಡೆಯುತ್ತಿರುವ 3ರಿಂದ 6 ವರ್ಷ ವಯಸ್ಸಿನ ಮಕ್ಕಳ ಸಂಖ್ಯೆಯಲ್ಲಿ ಹೆಚ್ಚಳ ಆಗಿರುವುದನ್ನು ನಿಖರವಾಗಿ ಅಂದಾಜು ಮಾಡುವುದು ಕಷ್ಟದ ಕೆಲಸ. ಹೀಗಾಗಿ ತ್ರಿಕೋನಮಾನ ವಿಶ್ಲೇಷಣಾ ತಂತ್ರದಿಂದ ಕಂಡುಹಿಡಿಯುವುದು ಕಷ್ಟದ ಕೆಲಸವೆನಿಸುತ್ತದೆ. ಆದಾಗ್ಯೂ, ದತ್ತಾಂಶದ ಮೂಲಗಳಲ್ಲಿ ಧನಾತ್ಮಕ ಪ್ರವೃತ್ತಿಯು ಸ್ಥಿರವಾಗಿ ಕಾಣಿಸುತ್ತಿದೆ.

ಅಧಿಕೃತ ಅಂಕಿಅಂಶಗಳ ಪ್ರಕಾರ, ಭಾರತದಲ್ಲಿ ICDS ಯೋಜನೆಯ ಅಡಿಲ್ಲಿ *‘ಅಂಗನವಾಡಿ’* ಕೇಂದ್ರಗಳಲ್ಲಿ ಶಾಲಾಪೂರ್ವದ ಶಿಕ್ಷಣಕ್ಕೆ ಹಾಜರಾಗುತ್ತಿರುವ 3-6 ವರ್ಷ ವಯಸ್ಸಿನ ಮಕ್ಕಳ ಸಂಖ್ಯೆಯು 2003-04ರಲ್ಲಿ 20 ಮಿಲಿಯ ಆಗಿದ್ದರೆ, 2006-07ರಲ್ಲಿ ಇದು 30 ಮಿಲಿಯಕ್ಕೆ ತಲುಪಿತ್ತು.

**ನಕಾಶೆ 5.2**

**ಭಾರತದಲ್ಲಿ ICDS ಯೋಜನೆಯ ಅಡಿಯಲ್ಲಿ ಅಂಗನವಾಡಿ ಕೇಂದ್ರವೊಂದರಲ್ಲಿ ಶಾಲಾಪೂರ್ವದ ಶಿಕ್ಷಣಕ್ಕೆ ಹಾಜರಾಗುತ್ತಿರುವ 3-6 ವರ್ಷ ವಯಸ್ಸಿನ ಮಕ್ಕಳ ಸಂಖ್ಯೆ ಮತ್ತು ಶೇಕಡಾ (ಮೂಲ:MWCD)**



ಪ್ರಗತಿಯ ವಿಚಾರದಲ್ಲಿ ಹೇಳುವುದಾದರೆ, 1989-90ರಲ್ಲಿದ್ದ 3-6 ವರ್ಷದ ವಯಸ್ಸಿನ ಮಕ್ಕಳ 15 ಶೇಕಡಾದಷ್ಟು ಎಲ್ಲೆಗೆರೆ ದಾಖಲಾತಿಯಿಂದ, ಈ ಶೇಕಡಾವು 1996-97ರಲ್ಲಿ 19.6 ಶೇಕಡಾಕ್ಕೆ ವೃದ್ಧಿಸಿದೆ. ಏಳನೇ AIES (NCERT, 2005) ವರದಿಯ ಪ್ರಕಾರ ಇನ್ನಷ್ಟು ಸುಧಾರಣೆಯಾಗಿರುವುದು ಕಂಡು ಬಂದಿದೆ. ಮಾದರಿ ಆಧಾರಿತದ್ದಾದ NSS 61ನೇ ಸುತ್ತಿನ ಪ್ರಕಾರ (ಭಾರತ ಸರ್ಕಾರ, 2004), ದತ್ತಾಂಶವು ನಂತರದ ದಿನಾಂಕಕ್ಕೆ ಸಂಬಂಧಿಸಿದ್ದು ಆಗಿದ್ದರೂ, ಕೇವಲ 22.5 ಶೇಕಡಾಕ್ಕೆ ಹೆಚ್ಚು ಕನಿಷ್ಠ ಮಿತಿಯ ಹೆಚ್ಚಳ ಉಂಟಾಗಿದೆ. ಆಸಕ್ತಿಯ ವಿಷಯವೆಂದರೆ, ರಾಷ್ಟ್ರೀಯ ಮಾದರಿ ಸಮೀಕ್ಷೆ (NSS) ದತ್ತಾಂಶ 2004-05ರ ಪ್ರಕಾರ, 4-5 ವರ್ಷ ವಯಸ್ಸಿನ ಮಕ್ಕಳ ಪೈಕಿ ಸುಮಾರು 48 ಶೇಕಡಾದಷ್ಟು ಮಕ್ಕಳು ECCE ಕೇಂದ್ರ (ಅಂಗನವಾಡಿ ಅಥವಾ ಶಾಲೆಗಳೊಂದಿಗೆ ಸೇರಿಕೊಂಡಿರುವ ಶಾಲಾಪೂರ್ವ ಕೇಂದ್ರಗಳು) ಅಥವಾ ಪ್ರಾಥಮಿಕ ಶಾಲೆಗಳಲ್ಲಿ ಹಾಜರಾಗುತ್ತಿದ್ದಾರೆ. ಸುಮಾರು 11.5 ಮಿಲಿಯ ಮಕ್ಕಳು ದೇಶದಲ್ಲಿ ಶಾಲಾಪೂರ್ವ ಶಾಲೆಗಳಿಗೆ ಹಾಜರಾಗುತ್ತಿದ್ದು, ಇನ್ನೂ ಸುಮಾರು 11.3 ಮಿಲಿಯ ಮಕ್ಕಳು ಪ್ರಾಥಮಿಕ ಶಾಲೆಗಳಿಗೆ ಹಾಜರಾಗುತ್ತಿದ್ದಾರೆ ಎಂದು ಅಂದಾಜಿಸಲಾಗಿದೆ. SSA (ಮೆಹ್ತಾ, 2007) ಮತ್ತು ICDS (2006) ಕಾರ್ಯಕ್ರಮವನ್ನು ಕ್ರೋಢೀಕರಿಸಿದಾಗ ದೊರೆಯುವ ತೀರಾ ಇತ್ತೀಚಿನ ದತ್ತಾಂಶ ಅಂದಾಜಿನ ಪ್ರಕಾರ, 3-6 ವರ್ಷ ವಯಸ್ಸಿನ ಮಕ್ಕಳು ECE ಗಳಿಗೆ ದಾಖಲಾಗುವ ಒಟ್ಟು ಅನುಪಾತವು 41.5 ಶೇಕಡಾ ಆಗಿದೆ (2006).

*ದಾಖಲಾತಿಗಳಲ್ಲಿ ಗ್ರಾಮೀಣ - ನಗರ ಭಿನ್ನತೆಗಳು:*

ಇಲ್ಲಿ ಗ್ರಾಮೀಣ – ನಗರ ಭಿನ್ನತೆಗಳು ಸಹ ಕಂಡು ಬಂದಿವೆ. ಕೇವಲ 21.4 % ಗ್ರಾಮೀಣ ಮಕ್ಕಳು ಯಾವುದೇ ಶಾಲಾಪೂರ್ವ ಕಾರ್ಯಕ್ರಮಕ್ಕೆ ಹಾಜರಾದರೆ, ಇದಕ್ಕೆ ಅನುರೂಪವಾದ

ನಗರ ಪ್ರದೇಶಗಳ ಸಂಖ್ಯೆಯು 36 ಶೇಕಡಾ ಆಗಿದೆ. ಇದೇ ವಯಸ್ಸಿನ ಪಂಗಡದ ಸರಿಸುಮಾರು 25 ಶೇಕಡಾದಷ್ಟು ಮಕ್ಕಳು ಗ್ರಾಮೀಣ ಪ್ರದೇಶಗಳಲ್ಲಿ ಪ್ರಾಥಮಿಕ ಶಾಲೆಗಳಿಗೆ ಹೋದರೆ ಈ ಸಂಖ್ಯೆಯು ನಗರ ಪ್ರದೇಶಗಳಲ್ಲಿ 27 ಶೇಕಡಾಕ್ಕಿಂತಲೂ ಹೆಚ್ಚಿನ ಪ್ರಮಾಣಕ್ಕೆ ಹೆಚ್ಚಾಯಿತು. ದಾಖಲಾತಿಯ ಶೇಕಡಾವಾರು ಗ್ರಾಮೀಣ ಪ್ರದೇಶಕ್ಕೆ 50.2 ಶೇಕಡಾ ಇದ್ದರೆ ನಗರ ಪ್ರದೇಶಕ್ಕೆ 13.9 ಶೇಕಡಾ ಇದೆ (IMRB, 2007). ಅಧಿಕೃತ ದಾಖಲೆಗಳ ಕೊರತೆ ಮತ್ತು ಸೀಮಿತ ವರದಿಗಾರಿಕೆಯ ಕಾರಣ ICDS ಅನ್ನು ಅತಿಯಾಗಿ ಪ್ರತಿನಿಧಿಸಿರುವ ಹಾಗೂ ಖಾಸಗಿ/NGO ದಾಖಲಾತಿಯನ್ನು ಕಡಮೆ ವರದಿ ಮಾಡಿರುವ ಸಾಧ್ಯತೆ ಇದೆ. ಒಂದು ಗ್ರಾಮೀಣ/ ನಗರ ಹೋಲಿಕೆಯನ್ನು ಮಾಡಿದ್ದರಲ್ಲಿ ಕಂಡುಬಂದ ಆಸಕ್ತಿದಾಯಕ ವ್ಯತ್ಯಾಸವೆಂದರೆ, ನಗರ ಪ್ರದೇಶಗಳ 39.4 ಶೇಕಡಾಕ್ಕೆ ಹೋಲಿಸಿದಾಗ, 2002 ರಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ECCE ಯಲ್ಲಿ 3-6 ವರ್ಷ ವಯಸ್ಸಿನ 13.5 ಶೇಕಡಾ ಮಕ್ಕಳು ದಾಖಲಾಗಿದ್ದರು ಎಂದು ಸೂಚಿಸಿತು. NSS (2004) ದತ್ತಾಂಶದ ಪ್ರಕಾರ, ಗ್ರಾಮೀಣ ಪ್ರದೇಶದ 23.4 ಶೇಕಡಾಕ್ಕೆ ಪ್ರತಿಯಾಗಿ ನಗರದ ದಾಖಲಾತಿಯಲ್ಲಿನ ಹೆಚ್ಚಳ ಶೇಕಡಾವಾರು ಪ್ರಮಾಣವು 20.7 ಶೇಕಡಾವಾಗಿತ್ತು. ದತ್ತಾಂಶ ಮೂಲಗಳ ಅಂತರ್ - ಹೋಲಿಕೆಯಲ್ಲಿ ಇರುವ ಮಿತಿಗಳ ಕಾರಣ ಈ ಹೋಲಿಕೆಯನ್ನು ಎಚ್ಚರಿಕೆಯಿಂದ ಪರಿಗಣಿಸಬೇಕು.

*ಸಾರ್ವಜನಿಕ - ಖಾಸಗಿ ಮುನ್ನೇರ್ಪಾಡುಗಳು:*

ಏಳನೇ AIES ದತ್ತಾಂಶದ ವರದಿಯ ಪ್ರಕಾರ (NCERT, 2005a) ಖಾಸಗಿಗೆ ಹೋಲಿಸಿದರೆ ಸಾರ್ವಜನಿಕ ಮುನ್ನೇರ್ಪಾಡಿನ ಮೇಲಿನ ಒಟ್ಟಾರೆ ಅವಲಂಬನೆಯು ಗಣನೀಯವಾಗಿ ಅಧಿಕವಾಗಿದ್ದು, ECCE ಯಲ್ಲಿ 98 ಶೇಕಡಾ ದಾಖಲಾತಿಯು ಸಾರ್ವಜನಿಕ ಕೇಂದ್ರಗಳಲ್ಲಿ ಆಗಿದ್ದರೆ, ಕೇವಲ 4 ಶೇಕಡಾದಷ್ಟು ದಾಖಲಾತಿಯು ಖಾಸಗಿ ಕೇಂದ್ರಗಳಲ್ಲಿ ಆಗಿದೆ. ಸಾರ್ವಜನಿಕ – ಖಾಸಗಿ ಹೋಲಿಕೆಗಳ ವಿಚಾರದಲ್ಲಿ ಹೇಳುವುದಾದರೆ, ECCE ಯಲ್ಲಿ ದಾಖಲಾದ 97.4 ಶೇಕಡಾ ಮಕ್ಕಳು ಸಾರ್ವಜನಿಕ ಕೇಂದ್ರಗಳಲ್ಲಿದ್ದರೆ, ಕೇವಲ 2.6 ಶೇಕಡಾದಷ್ಟು ಮಕ್ಕಳು ಖಾಸಗಿ ಕೇಂದ್ರಗಳಲ್ಲಿದ್ದಾರೆ.

*ECCE ದಾಖಲಾತಿಗಳಲ್ಲಿ ಲಿಂಗ ವ್ಯತ್ಯಾಸಗಳು:*

ಸಾರ್ವಜನಿಕ ಕೇಂದ್ರಗಳಲ್ಲಿ ಹುಡುಗಿಯರ ಶೇಕಡಾವು ಅಧಿಕವಾಗಿದ್ದು, ಆಸಕ್ತಿಕರ ಲಿಂಗ ವ್ಯತ್ಯಾಸವು (49.8 ಶೇಕಡಾದಷ್ಟು ಹುಡುಗರಿಗೆ ಹೋಲಿಸಿದರೆ 50.2 ಶೇಕಡಾದಷ್ಟು ಹುಡುಗಿಯರು) ಕಂಡು ಬಂದಿದೆ. ಆದರೆ ಖಾಸಗಿ ಕೇಂದ್ರಗಳಲ್ಲಿ ಇದು ಭಿನ್ನವಾಗಿದೆ (52.4 ಶೇಕಡಾ ಹುಡುಗರಿಗೆ ಹೋಲಿಸಿದರೆ 47.6 ಶೇಕಡಾದಷ್ಟು ಹುಡುಗಿಯರು). ಈ ಕ್ಷೇತ್ರದಲ್ಲಿ ಲಿಂಗ ವ್ಯತ್ಯಾಸವು ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತಿದೆ. ಏಕೆಂದರೆ ಪೋಷಕರು ತಮ್ಮ ಗಂಡು ಮಕ್ಕಳನ್ನು ಖಾಸಗಿ ಸಂಸ್ಥೆಗಳಿಗೆ ಕಳುಹಿಸುವುದನ್ನು ಇಷ್ಟ ಪಡುತ್ತಾರೆ. ಅಲ್ಲಿ ಉತ್ತಮ ಗುಣಮಟ್ಟವಿದೆ ಎಂದು ಭಾವಿಸಿ ಗಂಡು ಮಕ್ಕಳ ಮೇಲಿನ ಖರ್ಚನ್ನು ಹೂಡಿಕೆಯಾಗಿ ಇವರು ಪರಿಗಣಿಸುತ್ತಾರೆ.

*ಅಂತರ್ - ರಾಜ್ಯ ಭಿನ್ನತೆಗಳು:*

ಶಾಲಾಪೂರ್ವ ಕಾರ್ಯಕ್ರಮ ಹಾಗೂ ಶಾಲೆಗಳಲ್ಲಿ ಮಕ್ಕಳ ಪಾಲ್ಗೊಳ್ಳುವಿಕೆಯಲ್ಲಿ ಅಂತರ್ - ರಾಜ್ಯ ಭಿನ್ನತೆಗಳು ಕಾಣಸಿಗುತ್ತವೆ; ಈ ವಿಚಾರದಲ್ಲಿ ಉತ್ತರದ ರಾಜ್ಯಗಳು ಕಳಪೆ ಸಾಧನೆಯನ್ನು ಮಾಡಿವೆ (ನಕಾಶೆ 5.3 ಅನ್ನು ನೋಡಿ). ಶಾಲಾಪೂರ್ವದ ಶಿಕ್ಷಣಕ್ಕೆ ದಾಖಲಾದ 25 ಶೇಕಡಾಕ್ಕೂ ಹೆಚ್ಚಿನ ಮಕ್ಕಳು ಕೇರಳ, ಮಹಾರಾಷ್ಟ್ರ, ಪಂಜಾಬ್ ಮತ್ತು ತಮಿಳುನಾಡು ಮುಂತಾದ ರಾಜ್ಯಕ್ಕೆ ಸೇರಿದ್ದಾರೆ. ICDS ನಲ್ಲಿ ಹುಡುಗರ ಒಟ್ಟು ದಾಖಲಾತಿ ಅನುಪಾತವು ಅಲ್ಪ ಪ್ರಮಾಣದಲ್ಲಿ ಹುಡುಗಿಯರಿಗಿಂತಲೂ ಚೆನ್ನಾಗಿದೆ ಎಂದು

ವರದಿಯಾಗಿದೆ (ಭಾರತ ಸರ್ಕಾರ, 2000; ಕೌಲ್, 1999). ಪ್ರಾಥಮಿಕ ಶಿಕ್ಷಣ ಮತ್ತು ಸಾಕ್ಷರತೆ ಇಲಾಖೆಯ ಬಳಿ ಲಭ್ಯವಿರುವ ಅಂಕಿಅಂಶಗಳ ಪ್ರಕಾರ, ಪೂರ್ವ ಪ್ರಾಥಮಿಕ ಮಟ್ಟದಲ್ಲಿ ದಾಖಲಾದ ಮಕ್ಕಳ ಒಟ್ಟು ಸಂಖ್ಯೆಯು 46,23,168 ಆಗಿದ್ದು ಇವರಲ್ಲಿ 21,43,099 ರಷ್ಟು (46 ಶೇಕಡಾ) ಹುಡುಗಿಯರು ಇದ್ದಾರೆ. ECCE ಮುನ್ನೇರ್ಪಾಡು ರಾಜ್ಯಗಳು/ ಕೇಂದ್ರಾಡಳಿತ ಪ್ರದೇಶಗಳಲ್ಲಿ ಬಹಳಷ್ಟು ಅಸಮಾನವಾಗಿ ಹಂಚಿಕೆಯಾಗಿದೆ. ಮುಖ್ಯವಾಗಿ ಗ್ರಾಮೀಣ/ ನಗರ/ ಕೊಳಚೆ ಪ್ರದೇಶಗಳಲ್ಲಿ ಸ್ಪಷ್ಟವಾದ ಅಸಮಾನತೆಯನ್ನು ಕಾಣಬಹುದು. 2001ರ ಜನಗಣತಿಯ ಪ್ರಕಾರ, ದೇಶದಲ್ಲಿನ ನಗರ ಪ್ರದೇಶದ ಜನಸಂಖ್ಯೆಯು ಸರಿಸುಮಾರು 27.78 ಶೇಕಡಾ ಆಗಿದ್ದು (33 ಶೇಕಡಾಕ್ಕೆ ಹೆಚ್ಚುವ ನಿರೀಕ್ಷೆ ಇದೆ), ಇದು ಇನ್ನೂ ಹೆಚ್ಚಾಗಿರುವ ಸಾಧ್ಯತೆ ಇದೆ ಎಂದು ಕೆಲವು ರಾಜ್ಯಗಳು ವರದಿ ಮಾಡಿವೆ (ಭಾರತ ಸರ್ಕಾರ, 2004). ಆದಾಗ್ಯೂ, ಎಲ್ಲಾ ICDS ಯೋಜನೆಗಳ (ಗ್ರಾಮೀಣ, ನಗರ ಮತ್ತು ಬುಡಕಟ್ಟು) ಸುಮಾರು 13 ಶೇಕಡಾವು ಮಾತ್ರವೇ ನಗರ ಪ್ರದೇಶದಲ್ಲಿದ್ದು, ನಗರಕ್ಕೆ ಹೆಚ್ಚು ಗಮನ ಮತ್ತು ಆದ್ಯತೆ ನೀಡುವ ಅಗತ್ಯತೆ ಕಾಣುತ್ತಿದೆ.

ಆದಾಗ್ಯೂ, ಅನೇಕವೇಳೆ ಅಧಿಕೃತ ಅಂದಾಜುಗಳನ್ನು ಇತರ ದತ್ತಾಂಶ ಮೂಲಗಳ ಮೂಲಕ ತ್ರಿಕೋನಮಾನ ವಿಶ್ಲೇಷಣೆಯನ್ನು ಮಾಡುವುದಿಲ್ಲ. NSS 61ನೇ ಸುತ್ತಿನ ಪ್ರಕಾರ, 2004-05ರಲ್ಲಿ 3-6 ವಯೋವರ್ಗದ 90 ಮಿಲಿಯಕ್ಕೂ ಅಧಿಕ ಮಕ್ಕಳು ಭಾರತದಲ್ಲಿದ್ದಾರೆ (ಇದು 2006 ಜನಗಣತಿಯು ಮುನ್ನಂದಾಜು ಮಾಡಿದ ಸಂಖ್ಯೆಗಳನ್ನು ಹೋಲುತ್ತದೆ). ಆದಾಗ್ಯೂ, ಅಧಿಕೃತ ಅಂಕಿಅಂಶಗಳ ಪ್ರಕಾರ ICDS ನಲ್ಲಿ ದಾಖಲಾದ 22 ಮಿಲಿಯ ಮಕ್ಕಳಿಗೆ ಹೋಲಿಸಿದರೆ, NSS ಅಂದಾಜುಗಳ ಪ್ರಕಾರ ಶಾಲೆಗಳಲ್ಲಿ ಅಥವಾ ICDS ಗಳಲ್ಲಿ ಕೇವಲ ಸುಮಾರು 18 ಮಿಲಿಯ ಮಕ್ಕಳು ಶಾಲಾಪೂರ್ವ ಶಿಕ್ಷಣ ಪಡೆಯಲು ಹಾಜರಾಗುತ್ತಿದ್ದಾರೆ. NSS ಲೆಕ್ಕಾಚಾರಗಳ ಪ್ರಕಾರ 3ರಿಂದ 6 ವರ್ಷ ವಯಸ್ಸಿನ ಇನ್ನೂ 7 ಮಿಲಿಯದಷ್ಟು ಮಕ್ಕಳು ಖಾಸಗಿ ವಲಯದಲ್ಲಿ ಶಾಲಾಪೂರ್ವದ ಕಾರ್ಯಕ್ರಮಗಳಿಗೆ ಹಾಜರಾಗುತ್ತಿದ್ದಾರೆ.

ಸದ್ಯಕ್ಕೆ, ಆರು ವರ್ಷ ವಯಸ್ಸಿನ ಕೆಳಗಿನ 60 ಶೇಕಡಾದಷ್ಟು ಮಕ್ಕಳು ದೇಶದಲ್ಲಿ ಯಾವುದೇ ಶಾಲಾಪೂರ್ವದ ಶಿಕ್ಷಣವನ್ನು ಪಡೆಯುತ್ತಿಲ್ಲ. ಭಾರತದಂತಹ ವೈವಿಧ್ಯಮಯ ಮತ್ತು ಬೃಹತ್ ದೇಶದಲ್ಲಿ ಸಾರ್ವತ್ರಿಕ ಲಭ್ಯತೆಯನ್ನು ಸಾಧಿಸುವುದು ಸುಲಭದ ಮಾತಲ್ಲ ಎಂಬುದನ್ನು ನಾವು ಒಪ್ಪಿಕೊಳ್ಳಬೇಕು. ಸಂಖ್ಯೆಗಳಲ್ಲಿರುವ ಅಮೂಲಾಗ್ರ ಪ್ರಮಾಣವು ಸಮಸ್ಯೆಯ ಪ್ರಮುಖ ಆಯಾಮವೆನಿಸಿದೆ. ಹನ್ನೊಂದನೇ ಯೋಜನೆಯು, ಸರಿಸುಮಾರು 300 ಜನರು ಇರುವ ಜನಸಂಖ್ಯೆಯಲ್ಲಿ ಪ್ರತಿ 40 ಮಕ್ಕಳಿಗೆ ಒಂದು ECCE ಕೇಂದ್ರವನ್ನು ಸ್ಥಾಪಿಸಬೇಕು ಮತ್ತು ಇದು ಜನವಸತಿಗೆ ಸಮೀಪದಲ್ಲಿರಬೇಕು ಎಂದು ಶಿಫಾರಸ್ಸು ಮಾಡಿದೆ. ಅಲ್ಲದೆ ನಗರದ ಜನಸಂಖ್ಯೆಗೆ ನಿರ್ದಿಷ್ಟ ಕಾರ್ಯತಂತ್ರಗಳನ್ನು ರೂಪಿಸಬೇಕು ಎಂದು ಹೇಳಿದೆ. ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಪೂರ್ವ ಪ್ರಾಥಮಿಕ ವಿಭಾಗ/ ತರಗತಿಯನ್ನು ತೆರೆಯಬೇಕು ಎಂದು ಸಹ ಇದು ಶಿಫಾರಸ್ಸು ಮಾಡಿದೆ. ಇತ್ತೀಚಿನ ಅಧ್ಯಯನವೊಂದರ ವಿಶ್ಲೇಷಣೆಯ ಪ್ರಕಾರ, ಮುನ್ನೇರ್ಪಾಡಿನಲ್ಲಿ ಸುಮಾರು 1.1 ಮಿಲಿಯದಷ್ಟು ಅಂತರವಿದ್ದು ಹೆಚ್ಚುವರಿಯಾಗಿ 53 ಶೇಕಡಾದಷ್ಟು ಸಂಸ್ಥೆಗಳ ಅಗತ್ಯವಿರುವುದು ಕಂಡು ಬಂದಿದೆ ಎಂದು ಸೂಚಿಸುತ್ತದೆ.

**ನಕಾಶೆ 5.3**

**ರಾಜ್ಯಗಳಲ್ಲಿ ಪೂರ್ವ ಪ್ರಾಥಮಿಕ/ ಪ್ರಾಥಮಿಕ ಶಾಲಾ ಶಿಕ್ಷಣ ಪೂರ್ಣಗೊಳಿಸಿದ ECCE/ ಪ್ರಾಥಮಿಕ ಶಾಲೆಯಲ್ಲಿ ದಾಖಲಾದ 4-5 ವರ್ಷ ವಯಸ್ಸಿನ ಮಕ್ಕಳ ಶೇಕಡಾವಾರು ಪ್ರಮಾಣ (NSS 61ನೇ ಸುತ್ತು)**



**ವಿಭಾಗ VI**

# ಮಕ್ಕಳ ಮೇಲಿನ ಸಾರ್ವಜನಿಕ ವೆಚ್ಚ

ಭಾರತದ ಸಂವಿಧಾನದ ಪ್ರಕಾರ ಮಗುವಿಗೆ ಸಂಬಂಧಿಸಿದ ಮುನ್ನೇರ್ಪಾಡುಗಳು ಉಭಯಹಕ್ಕು ಜವಾಬ್ದಾರಿಗಳ ಪಟ್ಟಿಯಲ್ಲಿ ಇದ್ದು, ರಾಜ್ಯಗಳು ಸೇವಾ ತಲುಪಿಸುವಿಕೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಇದರ ಪರಿಣಾಮವಾಗಿ, ಮಗುವಿಗೆ ಸಂಬಂಧಿಸಿದ ಸೇವೆಗಳಿಗೆ ಹಣಕಾಸಿನ ಹಂಚಿಕೆಗಳು, ರಾಜ್ಯದ ಆರ್ಥಿಕ ಪರಿಸ್ಥಿತಿ ಮತ್ತು ಹಣಕಾಸಿನ ಆದ್ಯತೆಗಳ ಮೇಲೆ ಅವಲಂಬಿತವಾಗಿದ್ದು ರಾಜ್ಯದಿಂದ ರಾಜ್ಯಕ್ಕೆ ವ್ಯತ್ಯಾಸವಿತ್ತು. ಅಲ್ಲದೆ ರಾಜ್ಯಗಳ ಹೆಚ್ಚಿನ ವೆಚ್ಚಗಳು ಸಾಮಾನ್ಯವಾಗಿ ಪುನರಾವರ್ತನೆಯಾಗುವ ಯೋಜನೇತರ ವೆಚ್ಚಗಳಿಗೆ ಸಂಬಂಧಿಸಿರುತ್ತವೆ. ಸಾಮಾಜಿಕ ವಲಯಗಳಲ್ಲಿ ಹೊಸ ಹೂಡಿಕೆಗಳಿಗೆ ಮಾಡುವ ವೆಚ್ಚದಲ್ಲಿನ ಸಮತಲ ಅಸಮತೋಲನಗಳು ಮತ್ತು ರಾಜ್ಯದಿಂದ ರಾಜ್ಯಕ್ಕೆ ಫಲಿತಾಂಶಗಳಲ್ಲಿನ ಅಸಮಾನತೆಗಳು ಸ್ಪಷ್ಟವಾದವು. ಹೀಗಾಗಿ ವಿಶೇಷ ಉದ್ದೇಶದ ವಲಯವಾರು ವರ್ಗಾವಣೆಗಳಿಗಾಗಿ ಕೇಂದ್ರವು ಮಧ್ಯಪ್ರವೇಶ ಮಾಡಬೇಕಾಯಿತು. ಹೀಗೆ, ಕೇಂದ್ರ ಪ್ರಾಯೋಜಕತ್ವದ ಯೋಜನೆಗಳ ಮೂಲಕ ಕೊಡಮಾಡಿದ ಅನುದಾನಗಳು ಸುಧಾರಣೆ ಮತ್ತು ಗುಣಮಟ್ಟದ ವೃದ್ಧಿಗೆ ನೆರವು ನೀಡುತ್ತದೆ. ಸಮಗ್ರ ಮಕ್ಕಳ ಅಭಿವೃದ್ಧಿ ಯೋಜನೆ (ICDS), ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ (R&CH), ಸರ್ವ ಶಿಕ್ಷಾ ಅಭಿಯಾನ (SSA) ಇತ್ಯಾದಿಗಳು ಕೇಂದ್ರ ಪ್ರಾಯೋಜಿತ ಯೋಜನೆ(CSS) ಗಳಾಗಿದ್ದು, ಕೇಂದ್ರವು ಅನುದಾನವನ್ನು ಒದಗಿಸುತ್ತದೆ. ಆದರೆ ಇವುಗಳನ್ನು ಜಾರಿಗೊಳಿಸುವ ಮತ್ತು ತಲುಪಿಸುವಿಕೆಯ ಜವಾಬ್ದಾರಿಯನ್ನು ರಾಜ್ಯಗಳು ಹೊಂದಿವೆ.

ಅನೇಕ CSS ಗಳು ಮಗುವಿಗೆ ಸಂಬಂಧಿಸಿದ ಮುನ್ನೇರ್ಪಾಡುಗಳಿಗೆ ಅನುದಾನವನ್ನು ಒದಗಿಸುತ್ತಿದ್ದವಾದರೂ, ಅವುಗಳನ್ನು "ಮಗುವಿಗೆ ಸಂಬಂಧಿಸಿದ ಅನುದಾನ" ಗಳೆಂದು ನೋಡುವ ಯತ್ನಗಳು ನಡೆದದ್ದು ತುಂಬಾ ವಿರಳ. ಮೊದಲ ಬಾರಿಗೆ 2004-05ರಲ್ಲಿ, ಮಕ್ಕಳಿಗೆ ಸಂಬಂಧಿಸಿದ ಮುನ್ನೇರ್ಪಾಡುಗಳು ಮತ್ತು ವೆಚ್ಚಗಳನ್ನು ಹೆಚ್ಚು ಸಮಗ್ರವಾಗಿ ಪರಿಗಣಿಸುವುದಕ್ಕಾಗಿ ಭಾರತ ಸರ್ಕಾರದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು 'ಮಕ್ಕಳ ಬಜೆಟಿಂಗ್' ಕಾರ್ಯವನ್ನು ಕೈಗೆತ್ತಿಕೊಂಡಿತು. **ಮಕ್ಕಳ ಬಜೆಟಿಂಗ್** ಎನ್ನುವುದು ಮಕ್ಕಳಿಗೆ ಪ್ರಯೋಜನವಾಗುವ ಕಾರ್ಯಕ್ರಮಗಳಿಗೆ ಸರ್ಕಾರವು ಎಷ್ಟು ಸಂಪನ್ಮೂಲಗಳನ್ನು ಹಂಚುತ್ತಿದೆ ಮತ್ತು ಈ ಕಾರ್ಯಕ್ರಮಗಳು ಮಕ್ಕಳ ಅಗತ್ಯತೆಗಳು ಮತ್ತು ಹಕ್ಕುಗಳನ್ನು ಅಗತ್ಯ ಪ್ರಮಾಣದಲ್ಲಿ ಪ್ರತಿಫಲಿಸುತ್ತಿವೆಯೇ ಎಂಬುದನ್ನು ಪರಿಶೀಲಿಸುವ ಒಂದು ಯತ್ನವಾಗಿದೆ. ಮೂಲಭೂತವಾಗಿ ಇದು ಮಕ್ಕಳಿಗಾಗಿ ನೀಡುವ ಅನುದಾನಗಳ ಸಮರ್ಪಕತೆ ಮಾತ್ರವಲ್ಲದೆ ಅವುಗಳ ಬಳಕೆಯ ಕುರಿತು, ಮುಖ್ಯವಾಗಿ ನಿರೀಕ್ಷಿತ ಫಲಿತಾಂಶವನ್ನು ಪಡೆಯುವುದಕ್ಕಾಗಿ ಹೆಚ್ಚು ಫಲಕಾರಿಯ ರೀತಿಯಲ್ಲಿ ಬಳಸುತ್ತಿದೆಯೇ ಎಂಬ ಪ್ರಶ್ನೆಗೂ ಗಮನ ಹರಿಸುತ್ತದೆ. ಇದು ಭವಿಷ್ಯದಲ್ಲಿ ಮಕ್ಕಳ ಯೋಜನೆ ಮತ್ತು ಬಜೆಟಿಂಗ್ ಗಾಗಿ ಹೆಚ್ಚು ಸಮಗ್ರ ವಿಧಾನವನ್ನು ಅಳವಡಿಸಿಕೊಳ್ಳಬೇಕೆಂಬ ಒಳ್ಳೆಯ ಮುನ್ನೆಚ್ಚರಿಕೆಯನ್ನು ಕೊಡುತ್ತದೆ. ಆದಾಗ್ಯೂ, ಮಕ್ಕಳ ಬಜೆಟಿಂಗ್ ಕಾರ್ಯವು ಇಲ್ಲಿಯತನಕ ಭಾಗಶಃವಷ್ಟೇ ನಡೆದಿದೆ. ಏಕೆಂದರೆ ಅವರು ಮುಖ್ಯವಾಗಿ ಮಗುವಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು ಮಾಡುವ ವೆಚ್ಚಗಳನ್ನು ಮಾತ್ರ ಪರಿಗಣಿಸಿದ್ದಾರೆ, ಮತ್ತು ಅನೇಕವೇಳೆ ರಾಜ್ಯಗಳ ಹೆಚ್ಚಿನ ವೆಚ್ಚಗಳು ಪುನರಾವರ್ತಿತವಾಗಿದ್ದರೂ ಅವುಗಳು ಮಾಡುವ ವೆಚ್ಚಗಳನ್ನು ಇದು ಒಳಗೊಂಡಿಲ್ಲ.

ಮಕ್ಕಳ ಬಜೆಟಿಂಗ್ ಕಾರ್ಯದಲ್ಲಿ ಮಕ್ಕಳಿಗೆ ಹಂಚಲಾಗುವ ಸಾರ್ವಜನಿಕ ಅನುದಾನಗಳನ್ನು ನಾಲ್ಕು ಶೀರ್ಷಿಕೆಗಳಡಿಯಲ್ಲಿ ವರ್ಗೀಕರಿಸಲಾಗಿದೆ: ICDS ಮತ್ತು ಪೌಷ್ಠಿಕಾಂಶ, ಶಿಕ್ಷಣ, ಆರೋಗ್ಯ ಮತ್ತು ಮಗುವಿನ ರಕ್ಷಣೆ ಮತ್ತು ಇತರ. ಕೇಂದ್ರ ಬಜೆಟ್ ನಲ್ಲಿ, ಮಗುವಿಗೆ ಸಂಬಂಧಿಸಿದ ಮುನ್ನೇರ್ಪಾಡುಗಳಿಗಾಗಿ ಕೇಂದ್ರ ಪ್ರಾಯೋಜಿತ ಯೋಜನೆಗಳಿಗೆ ಮಾಡಲಾಗುವ ಹಂಚಿಕೆಯು 2006-07ರಲ್ಲಿ ಒಟ್ಟು ಹೂಡಿಕೆಯಲ್ಲಿ ಶೇಕಡಾ ಐದಕ್ಕಿಂತ ಕಡಮೆಯಾಗಿತ್ತು (4.9%). ಆದಾಗ್ಯೂ, ಖಂಡಿತವಾಗಿಯೂ ಇದು 1990ರ ಆರಂಭದಲ್ಲಿ (ಆ ಕಾಲದ ಹಂಚಿಕೆಯು ಒಂದು ಶೇಕಡಾಕ್ಕಿಂತಲೂ ಕಡಮೆ ಇತ್ತು – ನಕಾಶೆ 6.1 ನೋಡಿ) ಮಗುವಿಗೆ ಸಂಬಂಧಿಸಿದ ಸೇವೆಗಳಿಗೆ ಮಾಡಲಾಗುತ್ತಿದ್ದ ಹಂಚಿಕೆಗಳಿಗಿಂತ ಹೆಚಿದ್ದು ಸುಧಾರಣೆಯನ್ನು ಕಂಡಿದೆ.

**ನಕಾಶೆ 6.1**

**ಒಟ್ಟಾರೆ ಕೇಂದ್ರ ಬಜೆಟ್ ನಲ್ಲಿ ಮಗುವಿನ ಅಭಿವೃದ್ಧಿಯ ಮೇಲಿನ ವೆಚ್ಚದ ಪಾಲಿನಲ್ಲಿ ಹೆಚ್ಚಳ**




***ಕೇಂದ್ರ ಬಜೆಟ್ ನ ಶೇಕಡಾ**

*1990-91 *1992-93 *1994-95 *1996-97 *1998-99
*2000-01 *2002-03 *2004-05RE * 2006-07 BE

ರೋಗ್ಯ ಮಗುವಿನ ಅಭಿವೃದ್ಧಿ ಥಮಿಕ ಶಿಕ್ಷಣ
ಕಷ್ಟಕರ ಸನ್ನಿವೇಶದಲ್ಲಿರುವ ಮಕ್ಕಳು ಒಟ್ಟು

ಆಸಕ್ತಿಯ ವಿಚಾರವೇನೆಂದರೆ, ಮಗುವಿಗೆ ಸಂಬಂಧಿಸಿದ ಹೂಡಿಕೆಗಳಲ್ಲಿ ಕಂಡುಬರುವ ಬಹುತೇಕ ಹೆಚ್ಚಳವು ಪ್ರಾಥಮಿಕ ಶಿಕ್ಷಣ ವಲಯದಲ್ಲಿ ಮಾಡಲಾಗಿದೆ. ಕೇಂದ್ರ ಬಜೆಟ್ ನಲ್ಲಿನ ಮಗುವಿಗೆ ಸಂಬಂಧಿಸಿದ 70 ಶೇಕಡಾಕ್ಕೂ ಹೆಚ್ಚಿನ ಎಲ್ಲಾ ಮುನ್ನೇರ್ಪಾಡುಗಳು ಪ್ರಾಥಮಿಕ ಶಿಕ್ಷಣಕ್ಕೆ (ಮುಖ್ಯವಾಗಿ SSA ಗಾಗಿ) ಸಂಬಂಧಿಸಿದ್ದವು (ನಕಾಶೆ 6.2 ನೋಡಿ).

**ನಕಾಶೆ 6.2**

**ವಿವಿಧ ವಲಯಗಳ ನಡುವೆ ಮಗುವಿಗೆ ಸಂಬಂಧಿಸಿದ ಹೂಡಿಕೆಗಳ ಹಂಚಿಕೆ –**

**ಕೇಂದ್ರ ಬಜೆಟ್ 2005 – 06**



ಆದಾಗ್ಯೂ, ಕೇಂದ್ರ ಸರ್ಕಾರವು ಜಾರಿಗೊಳಿಸುತ್ತಿರುವ ಹೆಚ್ಚಿನ  ಮುನ್ನೇರ್ಪಾಡುಗಳ ಹೊರತಾಗಿಯೂ, ಅಂತಹ ಮುನ್ನೇರ್ಪಾಡುಗಳಿಗಾಗಿ ನಿರಂತರವಾಗಿ ಉಂಟಾಗುವ ಸಾಕಷ್ಟು ದೊಡ್ಡ ಪ್ರಮಾಣದಲ್ಲಿರುವ ವೆಚ್ಚವನ್ನು ರಾಜ್ಯ ಸರ್ಕಾರಗಳೇ ಭರಿಸುತ್ತವೆ. ಮಕ್ಕಳ ಅಭಿವೃದ್ಧಿಗೆ ಸಂಬಂಧಿಸಿದಂತೆ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಮಾಡುವ ಮುನ್ನೇರ್ಪಾಡುಗಳನ್ನು ಸಂಯೋಜಿಸಿ ಮಾಡಿದ ಮುನ್ನೇರ್ಪಾಡುಗಳ ವಿಶ್ಲೇಷಣೆಯು, ಕೇಂದ್ರದ ಮುನ್ನೇರ್ಪಾಡಿನ ಮೊತ್ತದಲ್ಲಿ ಹೆಚ್ಚಳ ಕಂಡುಬಂದರೂ ಮಗುವಿಗೆ ಸಂಬಂಧಿಸಿದ ಹೆಚ್ಚಿನ ಉಪವಲಯಗಳಲ್ಲಿ ರಾಜ್ಯ ಸರ್ಕಾರಗಳು ಮಾಡುವ ಮುನ್ನೇರ್ಪಾಡುಗಳ ಪ್ರಮಾಣ ದೊಡ್ಡದು. ಕೆಳಗೆ ನೀಡಿರುವ 6.3a ಮತ್ತು 6.3b ನಕಾಶೆಗಳನ್ನು ನೋಡಿ.

**ಇನ್ನೂ ಪ್ರಮುಖ ಕೊಡುಗೆದಾರರಾಗಿರುವ ರಾಜ್ಯಗಳು**

**ನಕಾಶೆ 6.3a**

**ಮಗುವಿನ ಅಭಿವೃದ್ಧಿಗಾಗಿ ಮಾಡುವ ಒಟ್ಟಾರೆ ವೆಚ್ಚದಲ್ಲಿ ಕೇಂದ್ರ-ರಾಜ್ಯಗಳ ಪಾಲುಗಳು: 1993-94**



**ನಕಾಶೆ 6.3b**

**ಮಗುವಿನ ಅಭಿವೃದ್ಧಿಗಾಗಿ ಮಾಡುವ ಒಟ್ಟಾರೆ ವೆಚ್ಚದಲ್ಲಿ ಕೇಂದ್ರ-ರಾಜ್ಯಗಳ ಪಾಲುಗಳು: 2002-03**




**ರಾಜ್ಯಗಳು 88%** **ಕೇಂದ್ರ 12%**

ಮಗುವಿಗೆ ಸಂಬಂಧಿಸಿದ ಮುನ್ನೇರ್ಪಾಡಿಗೆ ಮಾಡುವ ಒಟ್ಟಾರೆ ಹಂಚಿಕೆಯಲ್ಲಿ ಸುಧಾರಣೆ ಕಂಡಿದ್ದರೂ, ಬೇರೆ ಬೇರೆ ಕ್ಷೇತ್ರಗಳಲ್ಲಿ ಕಂಡುಬಂದ ಸುಧಾರಣೆಯು ಭಿನ್ನವಾಗಿತ್ತು ಹಾಗೂ ಬೇರೆ ಬೇರೆ ಸೇವೆಗಳಿಗಾಗಿ ಕೇಂದ್ರ – ರಾಜ್ಯಗಳು ನೀಡುವ ಕೊಡುಗೆಯಲ್ಲಿಯೂ ಭಿನ್ನತೆ ಇತ್ತು. ಆರೋಗ್ಯ, ಶಿಕ್ಷಣ, ICDS ಮತ್ತು ಇತರ ಮಕ್ಕಳ ಅಭಿವೃದ್ಧಿ ಸಂಬಂಧಿತ ಸೇವೆಗಳ ಮೇಲೆ ವ್ಯಯಿಸಿದ ಒಟ್ಟಾರೆ ಖರ್ಚಿನಲ್ಲಿನ ಸುಧಾರಣೆ ಮತ್ತು ಕೇಂದ್ರ ಹಾಗೂ ರಾಜ್ಯಗಳ ಸಾಪೇಕ್ಷ ಕೊಡುಗೆಗಳನ್ನು ತಿಳಿದುಕೊಳ್ಳಲು ನಕಾಶೆ 6.4a – d ನೋಡಿ. ಶಿಕ್ಷಣಕ್ಕೆ ಅಧಿಕ ಹೂಡಿಕೆ ಮತ್ತು ICDS ಹಾಗೂ ಇತರ ಸೇವೆಗಳಿಗೆ ಸಾಪೇಕ್ಷವಾಗಿ ಕಡಮೆ ಹೂಡಿಕೆ ಎಂದರೆ ಮಕ್ಕಳು ಬದುಕಿನ ನಂತರದ ಹಂತಗಳಲ್ಲಿ ಪಡೆಯುವಷ್ಟು ಗಮನವು ತೀರಾ ನಿರ್ಣಾಯಕ ಎನಿಸುವ ಆರಂಭಿಕ ವರ್ಷಗಳಲ್ಲಿ ಅವರಿಗೆ ಸಿಗುತ್ತಿಲ್ಲ ಎಂದರ್ಥ. ಅಲ್ಲದೆ, ಪ್ರತಿ ಮಗುವಿನ ಖರ್ಚಿಗೆ ಈ ಮೊತ್ತಗಳನ್ನು ಪರಿವರ್ತಿಸಿದಾಗ, ಕಾಲಾಂತರದಲ್ಲಿ ಇವುಗಳಲ್ಲಿ ಸುಧಾರಣೆ ಕಂಡು ಬಂದರೂ ಇನ್ನೂ ಅಪೇಕ್ಷಿತ ಮಟ್ಟವನ್ನು ಇವು ತಲುಪಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಒಟ್ಟಾರೆಯಾಗಿ, ಎಲ್ಲಾ ವಲಯಗಳಲ್ಲಿಯೂ ಪ್ರತಿ ಮಗುವಿಗೆ ಮಾಡಿರುವ ಹಂಚಿಕೆಗಳಲ್ಲಿನ ಹೆಚ್ಚಳವು ಪ್ರತಿ ಮಗುವಿನ ಹಂಚಿಕೆ / ವೆಚ್ಚಗಳಲ್ಲಿ ಹೆಚ್ಚಳಕ್ಕೆ ಕಾರಣವಾಯಿತಾದರೂ. ಆರಂಭಿಕ ವಯೋವರ್ಗದಲ್ಲಿ ಪ್ರತಿ ಮಗುವಿಗೆ ಮಾಡಿರುವ ಮುನ್ನೇರ್ಪಾಡು ಮತ್ತು ಶಾಲೆಗೆ ಹೋಗುವ ವಯೋವರ್ಗದ ಮಕ್ಕಳಿಗೆ ಮಾಡಿರುವ ಮುನ್ನೇರ್ಪಾಡಿನ ನಡುವೆ ವಿಶಾಲ ಅಂತರ ಇರುವುದು ಕಾಣಿಸುತ್ತದೆ; ಇದು ಮೆದುಳಿನ ಹೆಚ್ಚಿನ ಬೆಳವಣಿಗೆಯು (80%) ಮಗುವು ಮೂರನೇ ವಯಸ್ಸಿಗೆ ಕಾಲಿಡುವ ಮೊದಲು ನಡೆಯುವುದರಿಂದ ಆ ವಯಸ್ಸಿನ ಮೊದಲು

ಮಗುವಿಗೆ ಹೆಚ್ಚಿನ ಗಮನ ನೀಡಬೇಕು ಎಂದು ಅಂತರಾಷ್ಟ್ರೀಯ ಸಾಕ್ಷ್ಯಗಳು ತೋರಿಸಿಕೊಟ್ಟಿರುವುದರ ಹೊರತಾಗಿಯೂ ಸಹ ಇವೆ. ನಕಾಶೆ 6.5 ನೋಡಿ.

**ನಕಾಶೆ 6.4a**

**ICDS ಮೇಲಿನ ವೆಚ್ಚ: ಕೇಂದ್ರ ಮತ್ತು ರಾಜ್ಯಗಳು: 1993-94ರಲ್ಲಿ ನೈಜ ಬೆಲೆಗಳಲ್ಲಿ**




*ರೂ. ಕೋಟಿಗಳಲ್ಲಿ

***1993-94 *2002-03**

ರಾಜ್ಯಗಳು ಕೇಂದ್ರ

**ನಕಾಶೆ 6.4b**

**ಪ್ರಾಥಮಿಕ ಶಿಕ್ಷಣದ ಮೇಲಿನ ವೆಚ್ಚ: ಕೇಂದ್ರ ಮತ್ತು ರಾಜ್ಯಗಳು: 1993-94 ಸ್ಥಿರ ಬೆಲೆಗಳು**




*ರೂ. ಕೋಟಿಗಳಲ್ಲಿ

***1993-94 *2002-03**

ರಾಜ್ಯಗಳು ಕೇಂದ್ರ

## ನಕಾಶೆ 6.4c

ಬಡ ಮಕ್ಕಳ ಮೇಲಿನ ವೆಚ್ಚ: ಕೇಂದ್ರ ಮತ್ತು ರಾಜ್ಯಗಳು:

**1993-94 ಸ್ಥಿರ ಬೆಲೆಗಳು**




*ರೂ. ಕೋಟಿಗಳಲ್ಲಿ

*1993-94 *2002-03

ರಾಜ್ಯಗಳು ಕೇಂದ್ರ

## ನಕಾಶೆ 6.4d

ಆರೋಗ್ಯದ ಮೇಲಿನ ವೆಚ್ಚ: ಕೇಂದ್ರ ಮತ್ತು ರಾಜ್ಯಗಳು:

**1993-94 ಸ್ಥಿರ ಬೆಲೆಗಳು**




*ರೂ. ಕೋಟಿಗಳಲ್ಲಿ

*1993-94 *2002-03

ರಾಜ್ಯಗಳು ಕೇಂದ್ರ

**ನಕಾಶೆ 6.5**

**ಮೆದುಳಿನ ಸಂಚಿತ ಬೆಳವಣಿಗೆ ಮಾದರಿಗಳು (ಅಂತರಾಷ್ಟ್ರೀಯ ಪ್ರವೃತ್ತಿಗಳು) ಮತ್ತು ಭಾರತದಲ್ಲಿ ವಿವಿಧ ಯೋಜನೆಗಳ ಮೂಲಕ ಪ್ರತಿ ಮಗುವಿಗಾಗಿ ಮಾಡುವ ವೆಚ್ಚ (ಜನಸಂಖ್ಯೆಯಲ್ಲಿ ಪ್ರತಿ ಮಗು)**




*ಪ್ರತಿ ಮಗುವಿನ ಮೇಲಿನ ವೆಚ್ಚ (ರೂ. ಪ್ರಸ್ತುತ ಬೆಲೆಗಳಲ್ಲಿ):

*ಮೆದುಳಿನ ಬೆಳವಣಿಗೆಯ ಸಂಚಿತ %:

**X axis: 1 2 3 4 5 6 7 8 9 10 11 12 13 14 15**

◆ ಗುಂಪಿನಲ್ಲಿ ತಲಾ ಫಲಾನುಭವಿ ಮಗುವಿನ ಮೇಲೆ ಸರಾಸರಿ ಖರ್ಚು 2002

▲ ಗುಂಪಿನಲ್ಲಿ ತಲಾ ಫಲಾನುಭವಿ ಮಗುವಿನ ಮೇಲೆ ಸರಾಸರಿ ಖರ್ಚು 2006

■ ಮೆದುಳಿನ ಸಂಚಿತ ಬೆಳವಣಿಗೆ

*ಪರ್ಯಾಪ್ತ ಅನುದಾನದ ಸಮಸ್ಯೆಯನ್ನು ಬಗೆಹರಿಸುವುದು ಹೇಗೆ?* ಈಗಾಗಲೇ ವಿವರಿಸಿದಂತೆ, ಮಗುವಿಗೆ ಸಂಬಂಧಿಸಿದ ಸೇವೆಗಳು ರಾಜ್ಯದ ಹಂಚಿಕೆಯ ವಲಯದಲ್ಲಿ ಬರುತ್ತವೆ. ಕೇಂದ್ರ ಪ್ರಾಯೋಜಿತ ಯೋಜನೆಗಳ ಮೂಲಕ ಕೇಂದ್ರವು ಸಾಮಾಜಿಕ ಸೇವೆಗಳಿಗೆ ಹೆಚ್ಚಿನ ಅನುದಾನವನ್ನು ಒದಗಿಸುತ್ತಿದ್ದರೂ ರಾಜ್ಯಗಳು ಸಹ ತಮ್ಮ ಬಜೆಟ್ ವೆಚ್ಚವನ್ನು ಹೆಚ್ಚಿಸಿದಂತೆಯೇ ಅದಕ್ಕೆ ಪ್ರಮಾಣಾನುಪಾತದಲ್ಲಿ ಹಂಚಿಕೆಯನ್ನು ಹೆಚ್ಚಿಸುವುದು ಅತ್ಯಗತ್ಯ. ರಾಜ್ಯ ಬಜೆಟ್ ಗಳಲ್ಲಿ ಸಾಮಾಜಿಕ ವಲಯಗಳಿಗೆ ಮಾಡುವ ಹಂಚಿಕೆಯು ಇತ್ತೀಚಿನ ವರ್ಷಗಳಲ್ಲಿ ಇಳಿಕೆಯನ್ನು ಕಂಡಿದೆ. ಉದಾಹರಣೆಗೆ, ಒಟ್ಟಾರೆ ಬಜೆಟ್ ವೆಚ್ಚಗಳು (ರಾಜ್ಯಗಳ ವರಮಾನ ವೆಚ್ಚ) ಹೆಚ್ಚಿದರೂ, ಸಾಮಾಜಿಕ ವಲಯಗಳಿಗಾಗಿ ಮಾಡುವ ವೆಚ್ಚವು (ಮುಖ್ಯವಾಗಿ ಆರೋಗ್ಯಕ್ಕೆ) ಕಡಮೆ ಆಯಿತು (6.6 a ಮತ್ತು b ನಕಾಶೆಗಳನ್ನು ನೋಡಿ). ಇದನ್ನು ಸರಿಪಡಿಸುವ ಅಗತ್ಯವಿದೆ. ಸೂಕ್ತ ECE ಕಾರ್ಯಕ್ರಮಗಳ ಮೂಲಕ ಮೂರರಿಂದ ಆರು ವರ್ಷ ವಯೋಮಾನದ ಎಲ್ಲಾ ಮಕ್ಕಳನ್ನು ಹೇಗೆ ತಲುಪುವುದು ಎಂಬ ಕುರಿತ ಪ್ರಸ್ತುತ ಕಾಳಜಿಯ ನಡುವೆಯೇ ಸಂಬಂಧಿತ ಕಾರ್ಯಕ್ರಮಗಳಿಗೆ ಪರ್ಯಾಪ್ತ ಅನುದಾನವನ್ನು ಖಾತರಿಪಡಿಸುವುದು ಅಗತ್ಯ.

**ನಕಾಶೆ 6.6 a**

ಸಾಮಾಜಿಕ ಸೇವೆಗಳ ಮೇಲೆ ಎಲ್ಲಾ ರಾಜ್ಯಗಳ ಒಟ್ಟು ವೆಚ್ಚ




*ವರಮಾನ ವೆಚ್ಚದ % ಆಗಿ ಸಾಮಾಜಿಕ ಸೇವೆಗಳ ಮೇಲಿನ ವೆಚ್ಚ:

*ಸಾಮಾಜಿಕ ಸೇವೆಗಳ ಮೇಲಿನ ವೆಚ್ಚ: ರೂ. 1999-2000 ಬೆಲೆಗಳಲ್ಲಿ ನೂರು ಕೋಟಿ ರೂಪಾಯಿ

***X axis:**
***FY93-94 *FY94-95 *FY95-96 *FY96-97 *FY97-98 *FY98-99 *FY99-00 *FY00-01 *FY01-02 *FY02-03 *FY03-04 *FY04-05 *FY05-06 *FY06-07**

ವರಮಾನ ಆದಾಯದ % ಆಗಿ ಸಾಮಾಜಿಕ ಸೇವೆಗಳು

ಸಾಮಾಜಿಕ ಸೇವೆಗಳು (ಸ್ಥಿರ 1999-2000 ಬೆಲೆಗಳಲ್ಲಿ ನೂರು ಕೋಟಿ ರೂಪಾಯಿ)

**ನಕಾಶೆ 6.6b**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣದ ಮೇಲೆ ಎಲ್ಲಾ ರಾಜ್ಯಗಳ ಒಟ್ಟಾರೆ ವೆಚ್ಚ**




*ವರಮಾನ ವೆಚ್ಚದ % ಆಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣದ ಮೇಲಿನ ವೆಚ್ಚ:

*ಆರೋಗ್ಯ ಮತ್ತು ಕುಟುಂಬ ಕಲ್ಯಾಣದ ಮೇಲಿನ ವೆಚ್ಚ: 1999-2000
ಬೆಲೆಗಳಲ್ಲಿ ನೂರು ಕೋಟಿ ರೂಪಾಯಿ:

**X axis:**
***FY93-94 *FY94-95 *FY95-96 *FY96-97 *FY97-98 *FY98-99 *FY99-00 *FY00-01 *FY01-02 *FY02-03 *FY03-04 *FY04-05 *FY05-06 *FY06-07**

ವರಮಾ ಪಾಯದ % ಆಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ

(ಸ್ಥಿರ 1999-2000 ಬೆಲೆಗಳಲ್ಲಿ ನೂರು ಕೋಟಿ ರೂಪಾಯಿ)

ವಿಭಾಗ – VII

# ECCE ಯಲ್ಲಿ ಕೆಲವು ಪ್ರಮುಖ ವಿಚಾರಗಳು ಮತ್ತು ಕಾಳಜಿಗಳು

## ECCE ಯ ಹೊಣೆಗಾರಿಕೆ

ಜುಲೈ 2006ರಿಂದ, 3ರಿಂದ 6 ವರ್ಷದ ವಯಸ್ಸಿನ ಮಕ್ಕಳ ಆರಂಭಿಕ ಬಾಲ್ಯದ ಶಿಕ್ಷಣ ಸೇರಿದಂತೆ ECCE ವಿಷಯವು ಸರ್ಕಾರದ ವ್ಯವಹಾರ ನಿಯಮಗಳ ಅಡಿಯಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಶಿಕ್ಷಣ ಇಲಾಖೆಯಿಂದ ಹೊಸದಾಗಿ ಸೃಷ್ಟಿಸಿದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ವರ್ಗಾವಣೆಯಾಗಿದೆ. ಏಕೆಂದರೆ, ಸ್ಪಷ್ಟವಾಗಿ ಈ ಸಚಿವಾಲಯವು ECCE ಯ ಅತ್ಯಂತ ದೊಡ್ಡ ಕಾರ್ಯಕ್ರಮವಾದ ICDS ಅನ್ನು ಜಾರಿಗೊಳಿಸುತ್ತಿದೆ. ECCE ಘಟಕವನ್ನು ಈ ಸಚಿವಾಲಯಕ್ಕೆ ವರ್ಗಾಯಿಸುವ ಮೂಲಕ ವ್ಯಾಪ್ತಿಯು ವಿಸ್ತರಿಸುತ್ತದೆ ಹಾಗೂ ICDS ಕಾರ್ಯಕ್ರಮದ ಅಡಿಯಲ್ಲಿ ಕಲ್ಪಿಸಲಾದ ಆರೈಕೆ ಮತ್ತು ಶಿಕ್ಷಣವನ್ನು ಹೆಚ್ಚಿನ ಮಕ್ಕಳು ಪಡೆಯುತ್ತಾರೆ ಎಂದು ಭಾವಿಸಲಾಗಿದೆ. ಆದಾಗ್ಯೂ, ಈ ನಿರ್ಧಾರದ ಪ್ರಾಯೋಗಿಕ ಪರಿಣಾಮಗಳ ಕುರಿತು ಪ್ರತಿಕ್ರಿಯೆ ನೀಡಲು ಸಮಯ ಇನ್ನೂ ಕೂಡಿ ಬಂದಿಲ್ಲ. ಏಕೆಂದರೆ ECCE ಯು ICDS ನ ಆರು ಘಟಕಗಳಲ್ಲಿ ಒಂದಾಗಿದ್ದು, ಆರನೇ ಒಂದರಷ್ಟು ಗಮನವನ್ನು ಮಾತ್ರವೇ ಪಡೆಯುತ್ತಿದೆ ಹಾಗೂ ವಿನ್ಯಾಸದಲ್ಲಿ ಪರಿಕಲ್ಪನಾತ್ಮಕ ಬದಲಾವಣೆ ಆಗದಿದ್ದರೆ ಇದೇ ರೀತಿ ಮುಂದುವರಿಯಲಿದೆ.

ಈ ಆಡಳಿತಾತ್ಮಕ ಬದಲಾವಣೆಯು ಆರಂಭಿಕ ಬಾಲ್ಯದ ಶಿಕ್ಷಣದ ಹೊಣೆಗಾರಿಕೆ ಮತ್ತು ಅದು ಶಿಕ್ಷಣ ವಲಯದಲ್ಲಿ ECCE ಗೆ ನೀಡುವ ಕಡಮೆ ಆದ್ಯತೆಯಲ್ಲಿ ಪ್ರತಿಫಲಿಸುವುದನ್ನು ಕುರಿತು ಚರ್ಚೆಯನ್ನು ಹುಟ್ಟು ಹಾಕಿದೆ. ಶಿಕ್ಷಣದ ಕುರಿತು ರಾಷ್ಟ್ರೀಯ ನೀತಿ (1986) ಮತ್ತು ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನಲ್ಲಿ (2005) ಇದರ ಸೇರ್ಪಡೆಯ ಕುರಿತು ಒಂದು ಇಡೀ ಅಧ್ಯಾಯವನ್ನು ಮೀಸಲಿಡಲಾಗಿದ್ದರೂ, ಚರ್ಚೆ ಮಾತ್ರ ಮುಂದುವರಿದಿದೆ. ಆಸಕ್ತಿದಾಯಕವೆಂದರೆ, ಹನ್ನೊಂದನೇ ಯೋಜನೆಗಾಗಿ ಯೋಜನಾ ಆಯೋಗವು ತನ್ನ ವಿಧಾನ ಪ್ರಬಂಧದ ಮೂಲಕ ECE ಅನ್ನು ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ SSA ಕಾರ್ಯಕ್ರಮದ ಅಡಿಯಲ್ಲಿ ಇರಿಸಲು ಸಲಹೆ ನೀಡಿದ್ದು, ICDS ಮೂಲಕ 3 ವರ್ಷ ವಯಸ್ಸಿನ ಕೆಳಗಿನ ಮಕ್ಕಳ ಆರೋಗ್ಯ ಮತ್ತು ಪೌಷ್ಠಿಕಾಂಶದ ಅಗತ್ಯತೆಗಳನ್ನು ಈಡೇರಿಸುವುದಕ್ಕಾಗಿ ಹೆಚ್ಚು ಕೇಂದ್ರಿತ ಹಾಗೂ ಆದ್ಯತೆ ನೀಡುವ ವಿಧಾನವನ್ನು ಅಳವಡಿಸಲು ತಿಳಿಸಿದೆ. ಪ್ರಾಥಮಿಕ ಶಾಲೆಯಲ್ಲಿ ಮಕ್ಕಳನ್ನು ಹಿಡಿದಿಡುವುದು ಮತ್ತು ಗುಣಮಟ್ಟದಲ್ಲಿ ಸುಧಾರಣೆ ತರುವುದಕ್ಕಾಗಿ ಶಿಕ್ಷಣದ ಮೊದಲ ಹಂತವಾಗಿ ECCE ಹೊಂದಿರುವ ನಿರ್ಣಾಯಕ ಪಾತ್ರಕ್ಕೆ ಹೆಚ್ಚು ಒತ್ತು ನೀಡದೆ, ಬಹುಶಃ ಬಜೆಟ್ ಕಾರಣದಿಂದಾಗಿ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯವು ಈ ವಿಚಾರಕ್ಕೆ ಸ್ಪಷ್ಟವಾಗಿ ಪ್ರತಿರೋಧ ತೋರಿದೆ. ECCE ಮತ್ತು ಇದರ ವಿವರಗಳನ್ನು ಅರ್ಥ ಮಾಡಿಕೊಳ್ಳುವ ವಿಚಾರದಲ್ಲೂ ಸಾಕಷ್ಟು ಅಸ್ಪಷ್ಟತೆ ಇದೆ. ದೆಹಲಿಯ ಶಾಲೆಗಳ ಪ್ರವೇಶ ಪ್ರಕ್ರಿಯೆ ಮತ್ತು ಇಲಾಖೆಯ ವರ್ಗಾವಣೆಗಳ ಸುತ್ತ ಉಂಟಾಗಿರುವ ವಿವಾದಗಳಲ್ಲಿ ಇದು ಇತ್ತೀಚೆಗೆ ಪ್ರತಿಫಲನಗೊಂಡಿದೆ. ಈ ಅಂಶಗಳ ಕುರಿತು ಹೆಚ್ಚಿನ ಸ್ಪಷ್ಟತೆ ಮತ್ತು ಅರಿವಿನ ಅಗತ್ಯವಿದ್ದು, *'ECCE ಕುರಿತು*

*ಪ್ರತ್ಯೇಕ ನೀತಿ'* ಯನ್ನು ರೂಪಿಸುವುದು ಮತ್ತು ಎಲ್ಲಾ ದೃಷ್ಟಿಕೋನಗಳಿಂದ ಹಾಗೂ 3ರಿಂದ 6 ವರ್ಷ ವಯಸ್ಸಿನೊಳಗಿನ ಪ್ರತಿ ಉಪ ಹಂತಕ್ಕೆ ವಿವರಗಳನ್ನು ಸ್ಪಷ್ಟವಾಗಿ ರೂಪಿಸುವ ಮೂಲಕ ಇದನ್ನು ಸಾಧ್ಯವಾಗಿಸಬಹುದು; ಇಲ್ಲಿಯತನಕ ಪ್ರತೀ ವರ್ಷವೂ ಆ ವಯೋಮಾನದ ಮಕ್ಕಳ ಬದಲಾಗುತ್ತಿರುವ ಬೆಳವಣಿಗೆಯ ಅಗತ್ಯತೆಗಳು ಮತ್ತು ಬೇಡಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡದೆ ಅವರನ್ನು ಏಕರೂಪದ ಗುಂಪಾಗಿ ಪರಿಗಣಿಸಲಾಗುತ್ತಿತ್ತು.

## ಆರಂಭಿಕ ಬಾಲ್ಯದ ಶಿಕ್ಷಣದ ಗುಣಮಟ್ಟ ಮತ್ತು ನಿಯಂತ್ರಣ

ECCE ಪರಿಣಾಮದ ಹರವು, ಮುನ್ನೇರ್ಪಾಡಿನ ಗುಣಮಟ್ಟಕ್ಕೆ ನೇರವಾಗಿ ಸಂಬಂಧಿಸಿದೆ ಎಂದು ಸಂಶೋಧನೆಯು ಸಾಬೀತುಪಡಿಸಿದೆ. ಸಾರ್ವಜನಿಕ ವಲಯದ ಪ್ರಸ್ತುತ ವಿಧಾನವು ಬಹುಪಾಲು ಕನಿಷ್ಠತಾವಾದಿ ವಿಧಾನವಾಗಿದ್ದು, ಹೆಚ್ಚಿನ ಲಾಭವನ್ನು ತಂದು ಕೊಡುವುದಿಲ್ಲ. ವೃತ್ತಿಪರವಾಗಿ ತರಬೇತಾದ ಶಿಕ್ಷಕರ ಲಭ್ಯತೆ ಸೇರಿದಂತೆ ಮೂಲಭೂತ ಕಲಿಕಾ ವಾತಾವರಣವನ್ನಾದರೂ ಖಚಿತಪಡಿಸುವುದು ಮುಖ್ಯ. ಅಗತ್ಯ ಮೂಲಭೂತ ಸೌಕರ್ಯ ಮತ್ತು ಮುನ್ನೇರ್ಪಾಡಿನ ಜೊತೆಗೆ ಗಮನ ಹರಿಸಬೇಕಾದ ಹಾಗೂ ನೇರ ಪರಿಣಾಮ ಬೀರಬಲ್ಲ ಇನ್ನೆರಡು ಪ್ರಮುಖ ಅಂಶಗಳೆಂದರೆ ECCE ಪಠ್ಯಕ್ರಮ ಮತ್ತು ತರಬೇತಿ.

**3-6 ವರ್ಷ ವಯಸ್ಸಿನವರಿಗೆ ರೂಪಿಸಬೇಕಾದ ECCE ಪಠ್ಯಕ್ರಮ:**

ಭಾರತದಲ್ಲಿ, ನೀತಿ ಮತ್ತು ಹೊಂದಿಸಲಾದ ಪಠ್ಯಕ್ರಮ ಗುರಿಗಳಿಗೆ ಸಂಬಂಧಿಸಿದಂತೆ, ಬದುಕಿನ ಮೊದಲ ಆರು ವರ್ಷಗಳು, ಮಗುವಿನ ಜೀವನ ಪರ್ಯಂತ ಕಲಿಕೆ ಮತ್ತು ಬೆಳವಣಿಗೆಗೆ ಭದ್ರ ಬುನಾದಿ ಹಾಕುವುದಕ್ಕಾಗಿ ನಿರ್ಣಾಯಕವೆನಿಸಿವೆ ಎಂಬ ಸ್ಪಷ್ಟ ಅರಿವು ಇದೆ. ECCE ಯು ಪ್ರಸವಪೂರ್ವದ ಹಂತದಿಂದ 8 ವರ್ಷಗಳ ತನಕದ ಮಗುವಿನ ಸಮಗ್ರ ಬೆಳವಣಿಗೆಯನ್ನು ಉತ್ತೇಜಿಸುವ ಗುರಿಯನ್ನು ಹೊಂದಿದೆ. ಇದು ಸಂಜ್ಞಾನಾತ್ಮಕ ಬೆಳವಣಿಗೆ, ಭಾಷಾ ಬೆಳವಣಿಗೆ, ಸಾಮಾಜಿಕ ಮತ್ತು ಸಂವೇಗಾತ್ಮಕ ಬೆಳವಣಿಗೆ, ದೈಹಿಕ ಮತ್ತು ಚಾಲಕ ಬೆಳವಣಿಗೆ, ಸೃಜನಶೀಲತೆ ಮತ್ತು ಕಲಾಮೀಮಾಂಸೆಯ ಗುಣ ಗ್ರಹಣದ ಬೆಳವಣಿಗೆ, ವೈಯಕ್ತಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿಗೆ ಸಂಬಂಧಿಸಿದ ಮೌಲ್ಯಗಳ ಬೆಳವಣಿಗೆ, ವೈಜ್ಞಾನಿಕ ರೀತಿಯಲ್ಲಿ ಯೋಚಿಸುವುದು ಮತ್ತು ಆರೋಗ್ಯದಾಯಕ ಅಭ್ಯಾಸಗಳನ್ನು ಬೆಳೆಸಿಕೊಳ್ಳುವುದು ಮುಂತಾದ ವಿವಿಧ ಅಂಶಗಳಿಗೆ ಗಮನ ನೀಡುವುದನ್ನು ಒಳಗೊಂಡಿದೆ. ಮೇಲಿನ ಎಲ್ಲಾ ಕ್ಷೇತ್ರಗಳಲ್ಲಿ ಬೆಳವಣಿಗೆಯನ್ನು ಉತ್ತೇಜಿಸಲು ಬೇಕಾಗುವ ಚಟುವಟಿಕೆಗಳು, ಅನುಭವಗಳು ಮತ್ತು ಪರಿಸರವು ECCE ಪಠ್ಯಕ್ರಮದ ತಿರುಳನ್ನು ವ್ಯವಸ್ಥೆಗೊಳಿಸುತ್ತವೆ. ಈ ಪಠ್ಯಕ್ರಮವನ್ನು ಮೂರು ಉಪ – ಹಂತಗಳಲ್ಲಿ ಕಲ್ಪಿಸಲಾಗಿದೆ: **ಆರಂಭಿಕ ಪ್ರಚೋದನೆ** – ಮೂರು ವರ್ಷ ವಯಸ್ಸಿನ ಕೆಳಗಿನವರಿಗಾಗಿ ಮುಖ್ಯವಾಗಿ ಪೋಷಕರ ಪಾಲ್ಗೊಳ್ಳುವಿಕೆಯ ಮೂಲಕ ಹಾಗೂ ಸಾಪೇಕ್ಷವಾಗಿ ರಾಚನಿಕವಲ್ಲದ, ಮಗುವನ್ನು ಪೋಷಿಸುವ ರೀತಿಯಲ್ಲಿ ಶಿಕ್ಷಣ; **ಸಂಘಟಿತ ಕೇಂದ್ರ ಆಧಾರಿತ ನಲಿ-ಕಲಿ ಮತ್ತು ಬೆಳವಣಿಗೆ -ಉದ್ದೇಶಿತ** ಪಠ್ಯಕ್ರಮ – 3-4/5 ವರ್ಷ ವಯಸ್ಸಿನ ಮಕ್ಕಳಿಗಾಗಿ; ಮತ್ತು **ಶಾಲಾ ಪೂರ್ವಸಿದ್ಧತೆ** ಪಠ್ಯಕ್ರಮ – ಇದು ಶಾಲೆ ಸೇರಲು ಬಯಸುವ ಸಂಭಾವ್ಯ ಮಕ್ಕಳಿಗಾಗಿ ಇರುವ ಪಠ್ಯಕ್ರಮ, ಅಂದರೆ 4/5ರಿಂದ 6

ವರ್ಷ ವಯಸ್ಸಿನ ಮಕ್ಕಳಿಗಾಗಿ. ಇದು ಪ್ರಾಥಮಿಕ ಶಾಲೆಗೆ ಪೂರ್ವಸಿದ್ಧತೆಯಾಗಿ ಓದುವ ಮತ್ತು ಬರೆಯುವ ಸಿದ್ಧತೆ ಮತ್ತು ಸಂಖ್ಯಾ ಸಿದ್ಧತೆಯನ್ನು ಒಳಗೊಂಡಿದೆ. ಬೆಳವಣಿಗೆಯ ಹಿತದೃಷ್ಟಿಯಿಂದ ಸೂಕ್ತ ವೆನಿಸುವ ಪಠ್ಯಕ್ರಮದಲ್ಲಿನ ಈ ಒತ್ತನ್ನು ಆಗಲೇ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನ (2000) ಮೂಲಕ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣಕ್ಕಾಗಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (National Curriculum Framework for Elementary and Secondary Education (NCFESE), 1988) ಮತ್ತು ಈಗ ತೀರಾ ಇತ್ತೀಚಿಗೆ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (NCERT, 2005b) ಪುನರುಚ್ಚರಿಸಿವೆ. ಜೊತೆಗೆ, ಈ ಚೌಕಟ್ಟು, ECCE ಯಿಂದ ಎರಡನೇ ತರಗತಿಯ ತನಕ ಮಗುವಿನ ಶಿಕ್ಷಣವನ್ನು ಅವಿಚ್ಛಿನ್ನ ಸರಣಿಯಾಗಿ ಪರಿಗಣಿಸುತ್ತದೆ ಹಾಗೂ ವಿಧಾನ ಮತ್ತು ವಿಧಾನಶಾಸ್ತ್ರದ ಮುಂದುವರಿಕೆಗೆ ಒತ್ತು ನೀಡುತ್ತದೆ. ಎಲ್ಲಾ ಪಠ್ಯಕ್ರಮ ಚೌಕಟ್ಟುಗಳು ECCE ಹಂತದಲ್ಲಿ ಔಪಚಾರಿಕ ಶಿಕ್ಷಣ ಮತ್ತು ಮಕ್ಕಳ ಔಪಚಾರಿಕ ಮೌಲ್ಯಮಾಪನವನ್ನು ಅಸಮ್ಮತಿಸುತ್ತವೆ. ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಮಂಡಳಿಯು (National Council of Educational Research and Training (NCERT)) ನಿರಂತರವಾಗಿ ECCE ಗಾಗಿ ಅನೇಕ ಮಾರ್ಗದರ್ಶಿ ಪುಸ್ತಕಗಳು ಮತ್ತು ತರಬೇತಿ ಕೈಪಿಡಿಗಳನ್ನು ರಾಜ್ಯಗಳು ಮತ್ತು ECCE ಅನುಷ್ಠಾನಗೊಳಿಸುವ ಸಂಸ್ಥೆಗಳಿಗಾಗಿ ತಯಾರಿಸಿದೆ. ಆದಾಗ್ಯೂ, ಮೇಲೆ ಚರ್ಚಿಸಿದಂತೆ, ECCE ಯ ವ್ಯಾಪ್ತಿ ಮತ್ತು ಸ್ವರೂಪವನ್ನು ಇನ್ನಷ್ಟು ವಿವರವಾಗಿ ವಿಶ್ಲೇಷಣೆ ಮಾಡಿ ವಿಶಾಲವಾಗಿ ಹಬ್ಬಿಸಬೇಕಿದೆ.

ದೇಶದಲ್ಲಿ ECCE ಗೆ ಅನುಕೂಲಕರ ನೀತಿ ಚೌಕಟ್ಟು ಮತ್ತು ಸೂಕ್ತ ಪಠ್ಯಕ್ರಮ ಮಾರ್ಗದರ್ಶನವು ಲಭ್ಯವಿದೆಯಾದರೂ, ವಾಸ್ತವದ ವಿಚಾರವೇನೆಂದರೆ, ಏನನ್ನು ಸೂಚಿಸಲಾಗಿದೆ ಅಥವಾ ಸಲಹೆ ಮಾಡಲಾಗಿದೆ ಮತ್ತು ಏನನ್ನು ಅಭ್ಯಸಿಸಲಾಗುತ್ತಿದೆ ಇದರ ನಡುವೆ ಬೃಹತ್ ಅಂತರವಿದೆ. ಕಾರ್ಯರೀತಿಗೆ ಸಂಬಂಧಿಸಿದಂತೆ ವಿಶಾಲ ಶ್ರೇಣಿ ಇದ್ದು, ಹೆಚ್ಚಿನ ಸಂದರ್ಭಗಳಲ್ಲಿ ಪ್ರಾಥಮಿಕ ಪಠ್ಯಕ್ರಮದ ಕೆಳಮುಖ ವಿಸ್ತರಣೆಯಾಗಿರುವ ಹಾಗೂ ಅತಿಯಾದ ಹೊರೆಯೆನಿಸುವ ಖಾಸಗಿ ಶಾಲಾಪೂರ್ವ ಪಠ್ಯಕ್ರಮದಿಂದ ಹಿಡಿದು ಅತ್ಯಧಿಕವಾಗಿ ಸಾರಗುಂದಿಸಿದ 'ಬರೇ ಹಾಡು ಮತ್ತು ಪ್ರಾಸಗಳ' ICDS ಶಾಲಾಪೂರ್ವ ಶಿಕ್ಷಣ ಪಠ್ಯಕ್ರಮವನ್ನು ನಾವು ಕಾಣಬಹುದು. ಮೂರು ರಾಜ್ಯಗಳಲ್ಲಿ ICDS ಕಾರ್ಯಕ್ರಮದ ECE ಘಟಕದ ಪರಿಶೀಲನೆ ನಡೆಸಿದ ಇತ್ತೀಚಿನ ಅಧ್ಯಯನದ (IMRB, 2007) ಪ್ರಕಾರ, ಸರಾಸರಿಯಾಗಿ ಅಂಗನವಾಡಿಗಳು ಎರಡರಿಂದ ಎರಡೂವರೆ ಗಂಟೆಗಳ ಕಾಲ ಕಾರ್ಯ ನಿರ್ವಹಿಸುತ್ತವೆ ಹಾಗೂ ಒಟ್ಟಾರೆಯಾಗಿ, 66 ಶೇಕಡಾದಷ್ಟು ಅಂಗನವಾಡಿಗಳಲ್ಲಿ ಕಾರ್ಯಕರ್ತರು ಮತ್ತು ಮಕ್ಕಳು, ಹಾಜರಿ ತೆಗೆದುಕೊಳ್ಳುವುದು, ಮಕ್ಕಳಿಗೆ ಆಹಾರ ನೀಡುವುದು, ಮತ್ತು ಮಕ್ಕಳು ಪ್ರಾಸಗಳು ಮತ್ತು ಹಾಡುಗಳು ಹಾಡುವಂತೆ ಮಾಡುವುದು ಮುಂತಾದ ದೈನಂದಿನ ಚಟುವಟಿಕೆಗಳಲ್ಲೇ ಕಾಲ ಕಳೆಯುವುದನ್ನು ಗಮನಿಸಲಾಗಿದೆ. ಗಮನಿಸಲಾದ ಶೇಕಡಾ 58 ಅಂಗನವಾಡಿಗಳಲ್ಲಿ, ಮಕ್ಕಳಿಗೆ ಔಪಚಾರಿಕವಾಗಿ ಓದುವುದು ಮತ್ತು ಬರೆಯುವುದನ್ನು ಕಲಿಸುವುದು ಕಂಡು ಬಂತು. ಕನಿಷ್ಠ ಆಟ ಮತ್ತು ಕಲಿಕಾ ಸಾಮಗ್ರಿಯ ಬೆಂಬಲದೊಂದಿಗೆ ಶಾಲಾಪೂರ್ವದ ಶೈಕ್ಷಣಿಕ ಚಟುವಟಿಕೆಗಳನ್ನು ನಡೆಸಲಾಗುತ್ತದೆ. ಅಲ್ಲದೆ ಅಸಮರ್ಪಕ ಹೊರಾಂಗಣ ಮತ್ತು ಒಳಾಂಗಣ ಸ್ಥಳಾವಕಾಶ ಮತ್ತು ಮೂಲಭೂತ ಸೌಕರ್ಯಗಳು ಮತ್ತು ಸಮರ್ಥ ಕಾರ್ಯಕರ್ತರ ಕೊರತೆ ಎದ್ದು ಕಾಣುತ್ತದೆ. ಅಂಗನವಾಡಿ ಕಾರ್ಯಕರ್ತೆಯು ಶಾಲಾ ಪೂರ್ವದ ಶಿಕ್ಷಣದ ಜೊತೆಗೆ ಇತರ ಐದು ಕಾರ್ಯಗಳನ್ನು ನಡೆಸಬೇಕು. ಇದರಿಂದಾಗಿ ಅವರ ಕೆಲಸವು ಸಾಕಷ್ಟು ಅವಾಸ್ತವಿಕ ಎನಿಸುತ್ತದೆ. ICDS ಕುರಿತ ಇತ್ತೀಚಿನ ಸಮಾಲೋಚನೆಗಳು ECCE ಗೆ ಸಮರ್ಪಿತ ಎರಡನೇ ಕಾರ್ಯಕರ್ತರ ಅಗತ್ಯತೆಯನ್ನು ಬಲವಾಗಿ ಒತ್ತಿ ಹೇಳಿವೆ.

ಇನ್ನೊಂದೆಡೆ, ಖಾಸಗಿ/ ಸಾರ್ವಜನಿಕ ನರ್ಸರಿ ಶಾಲೆಗಳ ಶಾಲಾಪೂರ್ವ ಶಿಕ್ಷಣವು ಬಹುಮಟ್ಟಿಗೆ ಪ್ರಾಥಮಿಕ ಶಿಕ್ಷಣ ಪಠ್ಯಕ್ರಮದ ಕೆಳಮುಖ ವಿಸ್ತರಣೆ ಎನಿಸಿದೆ. ಅಲ್ಲದೆ ಶಿಕ್ಷಕರಿಗೆ ಹೆಚ್ಚಿನ ಸಂದರ್ಭದಲ್ಲಿ ECCE ತರಬೇತಿ ಸಿಕ್ಕಿರುವುದಿಲ್ಲ. ಸಮೀಕ್ಷೆಗಳ ಪ್ರಕಾರ, ECCE ಯನ್ನು ಅದರದ್ದೇ ಆದ ಗುಣಲಕ್ಷಣಗಳು ಮತ್ತು ಪಠ್ಯಕ್ರಮದ ಜೊತೆಗೆ ಶಿಕ್ಷಣದ ನಿರ್ದಿಷ್ಟ ಉಪ ಹಂತವಾಗಿ ರೂಪಿಸುವ ತತ್ವಗಳಿಗೆ ಶಾಲಾಪೂರ್ವ ಶಾಲೆಗಳು ಹೆಚ್ಚಿನ ಗಮನ ನೀಡಿಲ್ಲ. ಮುಖ್ಯವಾಗಿ ECCE ಯ ಗುಣಮಟ್ಟವನ್ನು ನಿಯಂತ್ರಿಸಬಲ್ಲ ಯಾವುದೇ ನಿಯಂತ್ರಣ ಮತ್ತು ಮಾನ್ಯತೆ ವ್ಯವಸ್ಥೆಯು ಭಾರತದಲ್ಲಿ ಇಲ್ಲದ ಕಾರಣ ನೀತಿ ಮತ್ತು ಕಾರ್ಯರೀತಿ ನಡುವಿನ ಅಂತರವು ಸೃಷ್ಟಿಯಾಗಿದೆ. ಇದು *'ಲಿಸ್ಸಾ ಫೇರ್ (laissez faire - ತಾಟಸ್ಥ್ಯ ನೀತಿ ಅಥವಾ ವ್ಯಾಪಾರ ಸ್ವಾತಂತ್ರ್ಯ)'* ನಂತಹ ಸನ್ನಿವೇಶವನ್ನು ಸೃಷ್ಟಿ ಮಾಡಿದ್ದು, ಇದರಿಂದಾಗಿ ಮುಖ್ಯವಾಗಿ ನಗರಗಳಲ್ಲಿ ಮಾನ್ಯತೆ ಪಡೆಯದ ಖಾಸಗಿ ಸಂಸ್ಥೆಗಳ ಅನಿರ್ಬಂಧಿತ ಬೆಳವಣಿಗೆಗೆ ಕಾರಣವಾಗಿದೆ. ಮಕ್ಕಳು ಬೆಳವಣಿಗೆಯ ದೃಷ್ಟಿಯಿಂದ ಸಿದ್ಧರಾಗದೆ ಇರುವ ಹಂತದಲ್ಲಿ ಪ್ರಾಥಮಿಕ ಹಂತದ ಪಠ್ಯಕ್ರಮವನ್ನು ಅಳವಡಿಸಲು ಹಾಗೂ ಕಠಿಣ ಮತ್ತು ಕಟ್ಟುನಿಟ್ಟಾದ ರೀತಿಯಲ್ಲಿ ಇದನ್ನು ಜಾರಿಗೊಳಿಸಲು ಹಾಗೂ ಹೀಗೆ ಎಳೆಯ ಮಕ್ಕಳ ಮೇಲೆ ಶೈಕ್ಷಣಿಕ ಒತ್ತಡವನ್ನು ಹಾಕಲು ಈ ಸಂಸ್ಥೆಗಳು ಹಿಂಜರಿಯುವುದಿಲ್ಲ. ಈ ಒತ್ತಡಗಳು 'ಪಠ್ಯಕ್ರಮದ ಭಾರ' ಎಂದು ಕರೆಯಲ್ಪಡುವ ವಿದ್ಯಮಾನದ ಆರಂಭಿಕ ಬಿಂದು ಎನಿಸುತ್ತದೆ ಹಾಗೂ ಕಲಿಕೆಯ ಮೇಲೆ ಸಾಕಷ್ಟು ವ್ಯತಿರಿಕ್ತ ಪರಿಣಾಮವನ್ನು ಬೀರುತ್ತದೆ. ಶೈಕ್ಷಣಿಕ ಹೊರೆಯನ್ನು ಕಡಮೆ ಮಾಡಲು ಸಲಹೆಗಳನ್ನು ಪಡೆಯುವುದಕ್ಕಾಗಿ ಭಾರತ ಸರ್ಕಾರವು 1990ರಲ್ಲಿ ಒಂದು ಸಮಿತಿಯನ್ನು ರೂಪಿಸಿತು. ಮುಖ್ಯವಾಗಿ ಖಾಸಗಿ ಶಾಲೆಗಳಲ್ಲಿ ಮಕ್ಕಳು ಹೊರಬೇಕಾದ ಪಠ್ಯಪುಸ್ತಕಗಳ ಸಂಖ್ಯೆಯ ಕಾರಣ ಉಂಟಾಗುವ ದೈಹಿಕ ಭಾರ ಮಾತ್ರವಲ್ಲದೆ ಗ್ರಹಿಕೆಯ ಕೊರತೆಗೆ ಕಾರಣವಾಗುವ ಭಾರದ ವಿಚಾರದ ಕುರಿತು ಸಹ ಈ ಸಮಿತಿಯು ಪ್ರಶ್ನೆಗಳನ್ನು ಎತ್ತಿತು. "ಸಾಕಷ್ಟು ವಿಚಾರಗಳನ್ನು ಕಲಿಸಲಾಗುತ್ತದೆ, ಆದರೆ ತಿಳಿದುಕೊಳ್ಳುವ ಅಥವಾ ಅರ್ಥ ಮಾಡಿಕೊಳ್ಳುವ ವಿಷಯಗಳು ತುಂಬಾ ಕಡಮೆ" ಎಂಬುದನ್ನು ಇದು ಗಮನಿಸಿತು. ಮೂರು R ಗಳ ಕಲಿಕೆ, ಔಪಚಾರಿಕ ಮೌಲ್ಯಮಾಪನ, ಎರಡು ಅಥವಾ ಎರಡೂವರೆ ವರ್ಷ ವಯಸ್ಸಿನಷ್ಟು ಎಳೆಯ ಪ್ರಾಯದಲ್ಲಿ ದಾಖಲಾತಿ – ಇವೆಲ್ಲವೂ ಯಶಸ್ಸನ್ನು ಅನುಭವಿಸಬೇಕಾದ ಮತ್ತು ಸಕಾರಾತ್ಮಕ ಸ್ವಸ್ವರೂಪ-ಕಲ್ಪನೆಯನ್ನು ಬೆಳಸಿಕೊಳ್ಳಬೇಕಾದ ವಯಸ್ಸಿನಲ್ಲಿ ಈ ಎಳೆಯ ಮಕ್ಕಳಿನ ಮೇಲೆ ಒತ್ತಡವನ್ನು ಹಾಕುತ್ತವೆ. ಮಕ್ಕಳಿಗೆ ಮತ್ತು ಹೆತ್ತವರಿಗೆ ಪ್ರವೇಶ ಪರೀಕ್ಷೆಗಳು, ಮನೆ-ಪಾಠ ಕೆಲಸ, ಅಂತರಕ್ರಿಯೆಯ ಮಾಧ್ಯಮವಾಗಿ ಇಂಗ್ಲಿಷ್ ಭಾಷೆಯನ್ನು ಬಳಸಬೇಕಾದ ಬೇಡಿಕೆ, ಮತ್ತು ಎಳೆಯ ಮಕ್ಕಳಿಗಾಗಿ ಶಾಲೆಗಳು ಸೂಚಿಸಿದ ಖಾಸಗಿ ಪ್ರಕಾಶಕರ ದೊಡ್ಡ ಪ್ರಮಾಣದ ಪುಸ್ತಕಗಳು – ಇವೆಲ್ಲವೂ ECCE ಯ ಪಠ್ಯಕ್ರಮಕ್ಕೆ ಸಂಬಂಧಿಸಿದ ಕಾಳಜಿಯ ಇತರ ಕ್ಷೇತ್ರಗಳಾಗಿವೆ ಹಾಗೂ ಹೆಚ್ಚು ನಿರ್ದಿಷ್ಟವಾಗಿ ಖಾಸಗಿ ನರ್ಸರಿ ಮತ್ತು ಪ್ರಾಥಮಿಕ ಶಾಲೆಗಳಿಗೆ ಅನ್ವಯಿಸುತ್ತವೆ. ಈ ಕಾರ್ಯರೀತಿಗಳು ಮಕ್ಕಳ ಹಾಗೂ ಒಟ್ಟಾರೆಯಾಗಿ ವ್ಯವಸ್ಥೆಯ ಆರೋಗ್ಯಕ್ಕೆ ಹಾನಿಕಾರಕವಾಗಿವೆ ಎಂಬುದನ್ನು ಒಪ್ಪಿಕೊಳ್ಳಲಾಗಿದೆ ಮತ್ತು ಸಮುದಾಯದ ಸದಸ್ಯರು ಹೆಚ್ಚು ಆಯುವ ಮತ್ತು/ ಅಥವಾ ಬೇಡಿಕೆಯ ಗ್ರಾಹಕರಾಗಿ ವರ್ತಿಸುವಂತೆ ಅರಿವು ಮೂಡಿಸುವ ಅಗತ್ಯತೆಯನ್ನು ನೀತಿ ದಾಖಲೆಗಳು ಒತ್ತಿ ಹೇಳಿವೆ. ಇದು ಒಂದು ಪರಿಣಾಮಕಾರಿಯದ ನಿಗಾ/ ನಿಯಂತ್ರಣದ ಸಾಧನವಾಗಿ ನೆರವಾಗಬಹುದು. ಈ ಅಂಶವನ್ನು ಇನ್ನಷ್ಟು ಉತ್ತೇಜಿಸುವ ಅಗತ್ಯವಿದೆ.

## ತರಬೇತಿ ಸಂಭಾರಗಳು ಮತು ಸಾಂಸ್ಥಿಕ ನೆರವು

ತರಗತಿಯ ನಿರ್ದಿಷ್ಟ ಸನ್ನಿವೇಶದ ಅಗತ್ಯತೆಗಳಿಗೆ ಗಮನ ಹರಿಸಲು ಶಿಕ್ಷಕರನ್ನು ಸಿದ್ಧಗೊಳಿಸುವ ಅತ್ಯಂತ ವಿಶೇಷಜ್ಞ ಕೌಶಲ್ಯಗಳು ಮತ್ತು ಜ್ಞಾನದ ಅಗತ್ಯವಿರುವ ನಲಿ-ಕಲಿ

ಆಧಾರಿತ ಮತ್ತು ಮಗು ಕೇಂದ್ರಿತ ವಿಧಾನಶಾಸ್ತ್ರದ ಮೇಲೆ ECCE ಯು ಗಮನ ನೀಡುವ ಕಾರಣ ಇದರ ಗುಣಮಟ್ಟಕ್ಕೆ ಸಂಬಂಧಿಸಿದಂತೆ ECCE ಶಿಕ್ಷಕರು/ ಸೇವೆ ಒದಗಿಸುವವರನ್ನು ಪರಿಣಾಮಕಾರಿಯಾಗಿ ಸಜ್ಜುಗೊಳಿಸುವುದು ಅತ್ಯಗತ್ಯ. ಪ್ರಾಥಮಿಕ ಶಾಲೆಯ ಅನುಭವವನ್ನು ಸ್ವತಃ ಎಲ್ಲಾ ಶಿಕ್ಷಕರು ಪಡೆದಿರುತ್ತಾರೆ ಹಾಗೂ ನಿಕಟ ಪರಿಚಯವನ್ನು ಹೊಂದಿರುತ್ತಾರೆ, ಆದರೆ ECCE ಕುರಿತಂತೆ ಹಾಗಲ್ಲ. ಸಾಪೇಕ್ಷವಾಗಿ ಇದು ಕಡಮೆ ತಿಳಿದಿರುವ ಅಥವಾ ಅನುಭವದ ಕ್ಷೇತ್ರವಾಗಿರುತ್ತದೆ. ಒಂದೆಡೆ ಇದು ಸವಾಲಿನ ವಿಷಯವಾಗಿದ್ದರೂ, ಇನ್ನೊಂದೆಡೆ ECCE ತರಬೇತಿಗೆ ಸೂಚಿಸಲಾದ ಅಗತ್ಯತೆಗಳು ಅಥವಾ ಮಾನದಂಡಗಳು ಇಲ್ಲ ಹಾಗೂ ತರಬೇತಿಯ ಮುನ್ನೇರ್ಪಾಡುಗಳ ಅವಧಿ ಮತ್ತು ಸ್ವರೂಪವು ವಿಪರೀತ ಅನಿರ್ದಿಷ್ಟವಾಗಿದೆ. ಇದು ಕೆಲವು ದಿನಗಳ ಅವಧಿಯಿಂದ (ತಮ್ಮದೇ ಆದ ಕೋರ್ಸುಗಳನ್ನು ನಡೆಸುವ ಅನೇಕ NGO ಗಳ ವಿಚಾರದಲ್ಲಿ) ಹಿಡಿದು ಎರಡು ವಾರಗಳ ತನಕ (ICDS ಆಗಿದ್ದಲ್ಲಿ), ಹಾಗೂ ಶಿಕ್ಷಕರನ್ನು ಶಾಲಾಪೂರ್ವದ ಹಂತಕ್ಕೆ (3-6 ವರ್ಷಗಳು) ಮತ್ತು ಪ್ರಾಥಮಿಕ ಹಂತದ ಮೊದಲು ಎರಡು ತರಗತಿಗಳಿಗೆ (6-8 ವರ್ಷಗಳು) ಸಿದ್ಧಪಡಿಸುವ ಸಾಪೇಕ್ಷ ದೀರ್ಘ ಸಮಯ ವ್ಯಾಪ್ತಿಯ (ಎರಡು ವರ್ಷಗಳ ತನಕದ) ಸಮಗ್ರ ನರ್ಸರಿ ಶಿಕ್ಷಕರ ತರಬೇತಿ ಕಾರ್ಯಕ್ರಮ (Nursery Teachers' Training (NTT)) ಸೇರಿದಂತೆ ವಿಶಾಲ ಶ್ರೇಣಿಯನ್ನು ಹೊಂದಿದೆ. ಅಲ್ಲದೆ, ಕೇಂದ್ರೀಯ ಪ್ರೌಢ ಶಿಕ್ಷಣ ಮಂಡಳಿ ಮತ್ತು ಅನೇಕ ರಾಜ್ಯ ಶಿಕ್ಷಣ ಮಂಡಳಿಗಳ ಶಿಕ್ಷಣದ (+2) ಉನ್ನತ/ ಹಿರಿಯ ಪ್ರೌಢ ಹಂತದ ಪಠ್ಯಕ್ರಮದಲ್ಲಿ ECCE ಯನ್ನು ವೃತ್ತಿಪರ ಶಿಕ್ಷಣದ ಕ್ಷೇತ್ರವಾಗಿ ಒಳಗೊಳ್ಳಲಾಗಿದೆ. ECCE ಯಲ್ಲಿ ಸರ್ಟಿಫಿಕೇಟ್ ಮತ್ತು ಡಿಪ್ಲೊಮಾ ಕೋರ್ಸುಗಳನ್ನು ನೀಡುವುದಕ್ಕಾಗಿ ತರಬೇತಿಯ ಮುಕ್ತ ಮತ್ತು ದೂರ ಕಲಿಕೆ ವಿಧಾನವನ್ನು ಸಹ ವ್ಯಾಪಕವಾಗಿ ಬಳಸಲಾಗಿದೆ. ಇಂದಿರಾ ಗಾಂಧಿ ನ್ಯಾಷನಲ್ ಓಪನ್ ಯೂನಿವರ್ಸಿಟಿ (IGNOU), ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಓಪನ್ ಸ್ಕೂಲಿಂಗ್ (NIOS) ಹಾಗೂ ರಾಜ್ಯಕ್ಕೆ ಸೀಮಿತವಾದ ಮುಕ್ತ ವಿಶ್ವವಿದ್ಯಾಲಯಗಳಾದ (State Specific Open Universities (SSOU ಗಳು)) ಕೋಟ ಓಪನ್ ಯೂನಿವರ್ಸಿಟಿ ಆಫ್ ರಾಜಸ್ಥಾನ್, ಭೋಜ್ ಓಪನ್ ಯೂನಿವರ್ಸಿಟಿ ಆಫ್ ಮಧ್ಯ ಪ್ರದೇಶ್, ಮತ್ತು RPDT ಓಪನ್ ಯೂನಿವರ್ಸಿಟಿ ಆಫ್ ಉತ್ತರ ಪ್ರದೇಶ್ ಇತ್ಯಾದಿಗಳು ಮುಕ್ತ ದೂರ ಶಿಕ್ಷಣ ವ್ಯವಸ್ಥೆಯ ಮೂಲಕ ವಿಶೇಷಜ್ಞ ಸರ್ಟಿಫಿಕೇಟ್ ಮತ್ತು/ಅಥವಾ ಡಿಪ್ಲೊಮಾ ಕೋರ್ಸುಗಳನ್ನು ECCE ಯಲ್ಲಿ ನೀಡುತ್ತಿವೆ. ಸೀನಿಯರ್ ಸೆಕೆಂಡರಿ ಶಿಕ್ಷಣವು ಈ ಕಾರ್ಯಕ್ರಮಗಳಿಗೆ ಪ್ರವೇಶ ಪಡೆಯಲು ಬೇಕಾಗುವ ವಿದ್ಯಾರ್ಹತೆಯಾಗಿದೆ. ಅಭ್ಯರ್ಥಿಯು ಈ ಕಾರ್ಯಕ್ರಮವನ್ನು ಒಂದರಿಂದ ನಾಲ್ಕು ವರ್ಷಗಳ ಶ್ರೇಣಿಯಲ್ಲಿ ಪೂರ್ಣಗೊಳಿಸುವಂತಾಗಲು ಇದರ ಅವಧಿಯನ್ನು ಹೊಂದಿಕೊಳ್ಳುವಂತೆ ಇಡಲಾಗಿದೆ. ರಾಷ್ಟ್ರೀಯ ಶಿಕ್ಷಕ ಶಿಕ್ಷಣ ಮಂಡಳಿಯು (National Council of Teacher Education (NCTE)) ಸಹ ಶಾಲಾಪೂರ್ವ ಮತ್ತು ನರ್ಸರಿ ಶಿಕ್ಷಕರ ತರಬೇತಿ ಕೋರ್ಸುಗಳನ್ನು ನಡೆಸುವ ಸಂಸ್ಥೆಗಳಿಗೆ ಮಾನ್ಯತೆ ನೀಡುವ ಕೆಲಸವನ್ನು ಕೈಗೆತ್ತಿಕೊಂಡಿದೆ. ಸದ್ಯಕ್ಕೆ ದೇಶದಲ್ಲಿ 5938 ವಿದ್ಯಾರ್ಥಿಗಳಿಗೆ ಪ್ರವೇಶ ಒದಗಿಸಬಲ್ಲ, NCTE ಯಿಂದ ಮಾನ್ಯತೆ ಪಡೆದ 124 ಶಾಲಾಪೂರ್ವ ಮತ್ತು ನರ್ಸರಿ ಶಿಕ್ಷಕರ ತರಬೇತಿ ಕೋರ್ಸುಗಳಿವೆ (NCTE, 2005). ಈ ಸಂಸ್ಥೆಗಳು 15 ರಾಜ್ಯಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಆದಾಗ್ಯೂ, ಮಾನದಂಡದ ಕಾರಣ, ಈ ಕೋರ್ಸುಗಳು ಸುಮಾರು 20 ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಲ್ಲಿ ಲಭ್ಯವಿಲ್ಲ. ಇಲ್ಲಿ ಮಾನ್ಯತೆ ಪಡೆದ ಯಾವುದೇ ಶಾಲಾಪೂರ್ವ/ ನರ್ಸರಿ ಶಿಕ್ಷಕರ ಶಿಕ್ಷಣ ಸಂಸ್ಥೆಗಳಿಲ್ಲ. NCTE ಮಾನದಂಡಗಳು ಸಾಕಷ್ಟು ಪ್ರಮಾಣದಲ್ಲಿ ಗುಣಮಟ್ಟದ ಆಯಾಮಗಳನ್ನು ಒಳಗೊಂಡಿರುವುದಿಲ್ಲ ಹಾಗೂ ಈ ನಿಟ್ಟಿನಲ್ಲಿ ಪರಿಶೀಲನೆಯ ಅಗತ್ಯವಿದೆ.

ಈ ರೀತಿಯ ತರಬೇತಿ ಮುನ್ನೇರ್ಪಾಡಿನ ಶ್ರೇಣಿಯ ಕಾರಣ, ಗುಣಮಟ್ಟದ ಖಾತರಿಯು ಶಿಕ್ಷಕರನ್ನು ಸಿದ್ಧಪಡಿಸುವಲ್ಲಿ ಪ್ರಮುಖ ಸಮಸ್ಯೆಯಾಗಿ ಉಳಿದುಕೊಂಡಿದೆ. ಅಲ್ಲದೆ, ECCE ಶಿಕ್ಷಕರ ಅರ್ಹತೆಯ ಮಾನದಂಡದ ವಿಚಾರ ಬಂದಾಗ, ಸರಿಸುಮಾರು ಯಾವುದೇ ಮಿತಿ ಇಲ್ಲದೆ ಇರುವುದರಿಂದ ಹಿಡಿದು (ICDS ಸಮುದಾಯ ಕಾರ್ಯಕರ್ತೆಯರ ವಿಚಾರದಲ್ಲಿ),

ಪ್ರಾಥಮಿಕ ತರಗತಿ (ಬಾಲವಾಡಿ ಕಾರ್ಯಕರ್ತೆಯರ ವಿಚಾರದಲ್ಲಿ), ಪ್ರೌಢ ಶಾಲೆಯ ಹಂತವನ್ನು ಉತ್ತೀರ್ಣರಾಗಿರುವುದು (*'ಬಾಲಸೇವಿಕಾ'* ಯರ ವಿಚಾರದಲ್ಲಿ), ಹನ್ನೆರಡನೇ ತರಗತಿ (IGNOU ಮತ್ತು ಸಮಗ್ರ ಶಾಲಾಪೂರ್ವ ಮತ್ತು ಪ್ರಾಥಮಿಕ ಶಿಕ್ಷಕರ ತರಬೇತಿ) ತನಕ - ಹೀಗೆ ಕನಿಷ್ಠ ಶೈಕ್ಷಣಿಕ ಅರ್ಹತೆಯ ಮಾನದಂಡ ಬದಲಾಗುತ್ತಲೇ ಹೋಗುತ್ತದೆ. ECCE ಕಾರ್ಯನಿರ್ವಾಹಕರ ಪ್ರವೇಶ ಹಂತ, ಶಿಕ್ಷಕರು/ ಕಾರ್ಯಕರ್ತೆಯರ ನೇಮಕ ಮತ್ತು ಪುನರಾವರ್ತಿತ ತರಬೇತಿ ಅಗತ್ಯತೆಗಳನ್ನು ಈಡೇರಿಸುವುದಕ್ಕಾಗಿ ಉತ್ತಮ ಸಂಪನ್ಮೂಲ ಹೊಂದಿರುವ ವಿಕೇಂದ್ರೀಕೃತ ರಚನೆಗಳು/ ಸಂಸ್ಥೆಗಳ ಲಭ್ಯತೆ, ಕಾರ್ಯನಿರ್ವಾಹಕರಿಗೆ ವೃತ್ತಿ ಪಥಗಳು ಮತ್ತು ಮೇಲ್ವಿಚಾರಣೆ ಮತ್ತು ನಿಗಾದಂತಹ ವಿಚಾರಗಳನ್ನು ಪರಿಗಣಿಸಲು ಮತ್ತು ಉದ್ದೇಶಿಸುವುದಕ್ಕಾಗಿ ECCE ಕುರಿತ ಯೋಜಿತ ಮಾನವ ಸಂಪನ್ಮೂಲಕ ನಿರ್ವಹಣೆ ನೀತಿಯ ಕೊರತೆಯು ಇಲ್ಲಿನ ಪ್ರಮುಖ ಸಮಸ್ಯೆಯಾಗಿದೆ. ಸ್ವಾವಲಂಬಿತ ಆಧಾರದ ಮೇಲೆ ದೆಹಲಿಯಲ್ಲಿ ಪ್ರಯತ್ನಿಸಿದಂತೆ ECCE ಯಲ್ಲಿ ಸೇವೆಯೊಂದಿಗಿನ ತರಬೇತಿಗಾಗಿ ಸಂಪನ್ಮೂಲ ಕೇಂದ್ರಗಳ ಜಾಲವನ್ನು ಸ್ಥಾಪಿಸುವ ಕೆಲವು ಪ್ರಾಯೋಗಿಕ ಉಪಕ್ರಮಗಳನ್ನು ಸಾರ್ವಜನಿಕ - ಖಾಸಗಿ ಯತ್ನವಾಗಿ ಪ್ರಯತ್ನಿಸಬಹುದು. ಉತ್ತಮ ಕಾರ್ಯರೀತಿಯದ ಬೋಧನಾ ತಾಣಗಳ ಸೀಮಿತ ಲಭ್ಯತೆ, ತಾತ್ವಿಕವಾಗಿ ಪ್ರತಿಪಾದಿಸಿದ ವಿಧಾನಶಾಸ್ತ್ರ ಮತ್ತು ನೈಜ ಕಾರ್ಯರೀತಿ ಸನ್ನಿವೇಶಗಳ ನಡುವಿನ ಅಸಂಗತತೆ, ಅಸಮರ್ಪಕ ನೇರ ಮತ್ತು ಚಿಂತನಾಶೀಲ ತರಬೇತಿ ಮತ್ತು ಸನ್ನಿವೇಶಕ್ಕೆ ತಕ್ಕುದಾದ ವಿಧಾನಗಳ ಅಗತ್ಯವಿರುವ ಶಿಕ್ಷಾರ್ಥಿಗಳಲ್ಲಿ ಶೈಕ್ಷಣಿಕ ಮಟ್ಟಗಳಲ್ಲಿ ಭಿನ್ನತೆ ಇತ್ಯಾದಿ ಸಮಸ್ಯೆಗಳು ECCE ತರಬೇತಿಯಲ್ಲಿ ಕಾಣಿಸಿಕೊಂಡಿವೆ.

## ದತ್ತಾಂಶದ ವಿಶ್ವಾಸಾರ್ಹತೆ ಮತ್ತು ಸಾಂಖ್ಯಿಕ ವಿನ್ಯಾಸಗಳು

ECCE ಕುರಿತು ಯಾವುದೇ ಸಾಂಖ್ಯಿಕ ದತ್ತಾಂಶ ಮೂಲವು ಲಭ್ಯವಿಲ್ಲದ ಕಾರಣ ಲಭ್ಯವಿರುವ ಬೇರೆ ಬೇರೆ ದತ್ತಾಂಶ ಮೂಲಗಳನ್ನು ಅವಲಂಬಿಸಬೇಕಾಗುತ್ತದೆ. ಎರಡು ಪ್ರಮುಖ ಅಂಶಗಳು ದತ್ತಾಂಶದ ವಿಶ್ವಾಸಾರ್ಹತೆಯನ್ನು ನಿರ್ಬಂಧಿಸುತ್ತವೆ: (a) ಅನೇಕ ರಾಜ್ಯಗಳಲ್ಲಿ, ಪ್ರಾಥಮಿಕ ಶಾಲೆಯನ್ನು ಸೇರುವ ವಯಸ್ಸು 5+ ವರ್ಷಗಳಾಗಿದ್ದು, ICDS ಕಾರ್ಯಕ್ರಮವು 3-6 ವರ್ಷ ವಯಸ್ಸಿನ ಮಕ್ಕಳನ್ನು ಒಳಗೊಂಡಿರುತ್ತದೆ. ಹೀಗಾಗಿ 5 ವರ್ಷ ವಯಸ್ಸಿನ ಮಕ್ಕಳನ್ನು ಎರಡು ಬಾರಿ ಎಣಿಸುವ ಸಾಧ್ಯತೆ ಇರುತ್ತದೆ; (b) AIES (2002) ಖಾಸಗಿ ಉಪಕ್ರಮಗಳ ಕುರಿತು ವರದಿ ಮಾಡುತ್ತದೆಯಾದರೂ, ಖಾಸಗಿ ಶಾಲಾಪೂರ್ವ ಶಾಲೆಗಳು (ಕೌಟುಂಬಿಕ ದಿನ ಆರೈಕೆ ನಿಲಯಗಳು, ನರ್ಸರಿಗಳು, ಕಿಂಡರ್ಗಾರ್ಟನ್‌ಗಳು ಮತ್ತು ಪೂರ್ವ ಪ್ರಾಥಮಿಕ ತರಗತಿಗಳು ಸೇರಿದಂತೆ) ಮಾಹಿತಿ ನೀಡಬೇಕಾದುದು ಕಡ್ಡಾಯವಿಲ್ಲದೆ ಇರುವುದರಿಂದ ವರದಿಗಾರಿಕೆಯಲ್ಲಿ ಸಂಪೂರ್ಣವಾಗಿ ಎಲ್ಲವನ್ನೂ ಒಳಗೊಳ್ಳುವುದನ್ನು ಖಾತರಿಪಡಿಸುವ ಯಾವುದೇ ದಾರಿ ಇಲ್ಲ. ಅಲ್ಲದೆ, ನೋಂದಣಿಯ ಯಾವುದೇ ವ್ಯವಸ್ಥೆಯ ಅನುಪಸ್ಥಿತಿಯಲ್ಲಿ ಈ ಸಂಸ್ಥೆಗಳ ಕುರಿತು ಯಾವುದೇ ಒಂದು ಅಧಿಕೃತ ದಾಖಲೆ ಇಲ್ಲ. ಐದು ವರ್ಷ ವಯಸ್ಸಿನ ಮಕ್ಕಳ ಸ್ಥಿತಿಗತಿಯ ಕುರಿತು ಮಾಡಿದ ಒಂದು ವಿಶ್ಲೇಷಣೆಯ ಪ್ರಕಾರ, ಕೇವಲ 21.3 ಶೇಕಡಾ ಮಕ್ಕಳು ಶಾಲಾಪೂರ್ವ ಶಾಲೆಗಳಿಗೆ ಹಾಜರಾಗುತ್ತಿದ್ದರು, 39.3 ಶೇಕಡಾ ಮಕ್ಕಳು ಪ್ರಾಥಮಿಕ ಶಾಲೆಗೆ ಹಾಜರಾಗುತ್ತಿದ್ದರು, ಹಾಗೂ 39.4 ಶೇಕಡಾ ಮಕ್ಕಳು ಯಾವುದೇ ರೀತಿಯ ಶಾಲೆ/ ಶಾಲಾಪೂರ್ವ ಶಾಲೆಯಿಂದ ಹೊರಗುಳಿದಿದ್ದರು (National Sample Survey Office (NSSO), 2004). SRI (Social and Rural Research Institute) ಸಮೀಕ್ಷೆಯು, 5 ವರ್ಷ ವಯಸ್ಸಿನ 20.2 ಶೇಕಡಾದಷ್ಟು ಮಕ್ಕಳು ಶಾಲೆಯಿಂದ ಹೊರಗುಳಿದಿವೆ ಎಂದು ವರದಿ ಮಾಡಿದೆ. ECCE ಮುನ್ನೇರ್ಪಾಡು ಮತ್ತು ಬಳಕೆಗಾಗಿ ಹೆಚ್ಚು ವಿಶ್ವಾಸಾರ್ಹ ಮತ್ತು ಉನ್ನತ ಗುಣಮಟ್ಟದ ದತ್ತಾಂಶ ವ್ಯವಸ್ಥೆಯ ಅಗತ್ಯವಿದೆ ಎಂಬುದನ್ನು ಇದು ತೋರಿಸುತ್ತದೆ.

ಸಾಂದರ್ಭಿಕ ವಾಸ್ತವಿಕತೆಗಳನ್ನು ಆಧರಿಸಿ, ಅಗತ್ಯ ಮೂಲಭೂತ ಸೌಕರ್ಯದ ಅಗತ್ಯತೆಗಳು ಮಾತ್ರವಲ್ಲದೆ ECCE ಶಿಕ್ಷಕರ ಮೂಲಭೂತ ಅಗತ್ಯತೆಗಳು, ಪಠ್ಯಕ್ರಮದ ವ್ಯಾಪ್ತಿ ಮತ್ತು ಸ್ವರೂಪ ಹಾಗೂ ತರಬೇತಿ ಮತ್ತು ಸಂಪನ್ಮೂಲದ ಬೆಂಬಲ - ಇತ್ಯಾದಿಗಳ ಕುರಿತು ಸಂಬಂಧಿತ ಎಲ್ಲಾ ಪಾಲುದಾರರ ನಡುವೆ ಸಾಮಾನ್ಯ ತಿಳುವಳಿಕೆ ಮೂಡಿಸುವುದಕ್ಕಾಗಿ ಮತ್ತು ಇದಕ್ಕೆ ಸಂಬಂಧಿಸಿದಂತೆ ಕನಿಷ್ಠ ಗುಣಮಟ್ಟದ ಮಾನದಂಡಗಳ ಚೌಕಟ್ಟಿನೊಂದಿಗೆ ನೋಂದಣಿ ಮತ್ತು ಮಾನ್ಯತೆ ವ್ಯವಸ್ಥೆಯನ್ನು ರೂಪಿಸುವ ಅಗತ್ಯವಿದೆ.

## ಹೆಚ್ಚುತ್ತಿರುವ ವ್ಯಾಪ್ತಿ

ICDS ನ ನಿರಂತರ ವಿಸ್ತರಣೆಯ ಹೊರತಾಗಿಯೂ, ECCE ಯಲ್ಲಿ ಮಕ್ಕಳ ಒಳಗೊಳ್ಳುವಿಕೆಯು 40 ಶೇಕಡಾದ ಮಟ್ಟದಲ್ಲಿಯೇ ಇದೆ. ಇದು ಅಸಮರ್ಪಕ ಲಭ್ಯತೆ ಮತ್ತು ಸೇವಾ ತಲುಪಿಸುವಿಕೆಯ ಅಸಮರ್ಪಕ ಗುಣಮಟ್ಟದ ಸಮಸ್ಯೆಯಾಗಿ ಮುಂದುವರಿದಿದೆ. ECCE ಯ ಮುಖ್ಯ ವಾಹಕವಾಗಿ ICDS ಮುಂದುವರಿಯುತ್ತಿರುವುದರಿಂದ, ಮುಂದಿನ ಕೆಲವು ವರ್ಷಗಳೊಳಗೆ ಈ ಸೇವೆಯನ್ನು ಇನ್ನಷ್ಟು ವಿಸ್ತರಿಸಲು ಮತ್ತು ಸಾರ್ವತ್ರೀಕರಿಸಲು ಭಾರತ ಸರ್ಕಾರವು ಪ್ರಸ್ತಾವಿಸಿದೆ. ಇದೊಂದು ಸ್ವಾಗತಾರ್ಹ ಪ್ರಸ್ತಾವನೆಯಾಗಿದ್ದರೂ, ಇದನ್ನು ವೇಗವಾಗಿ ವಿಸ್ತರಿಸುವ ಮತ್ತು ಗುಣಮಟ್ಟದಲ್ಲಿ ರಾಜಿ ಮಾಡಿಕೊಳ್ಳುವ ಅಪಾಯವಿದೆ. ಅಲ್ಲದೆ ‘ಒಂದೇ ಕೆಲಸವನ್ನು ಮತ್ತೆ ಮತ್ತೆ ಮಾಡುವ’ ಸಾಧ್ಯತೆಯೂ ಇದೆ. ಇದು ಒಂದಷ್ಟು ಮಟ್ಟಕ್ಕೆ ಲಾಭವನ್ನು ತಂದು ಕೊಡಬಹುದು, ಆದರೆ ಮಾಡಿದ ಹೂಡಿಕೆಗೆ ಅನುಗುಣವಾಗಿ ಲಾಭ ದೊರೆಯದು. ಪೌಷ್ಠಿಕಾಂಶದ ಕುರಿತು ಇತ್ತೀಚೆಗೆ ನಡೆಸಿದ ಅಧ್ಯಯನವೊಂದರ ಪ್ರಕಾರ ICDS ನ ಅನುಷ್ಠಾನದಲ್ಲಿ ಮೂರು ಹೊಂದಾಣಿಕೆ ಕೊರತೆಗಳು ಕಂಡು ಬಂದಿದ್ದು ಅವುಗಳನ್ನು ಬಗೆಹರಿಸಬೇಕಾದ ಅಗತ್ಯವಿದೆ. ಇವು ಸೇವೆಗಳು, ಫಲಾನುಭವಿಗಳು ಮತ್ತು ಭೌಗೋಳಿಕ ಪ್ರದೇಶಗಳ ಹೊಂದಾಣಿಕೆಯ ಕೊರತೆಗಳಿಗೆ ಸಂಬಂಧಿಸಿವೆ (ವಿಶ್ವ ಬ್ಯಾಂಕ್, 2005a). ಸೇವಾ ಹೊಂದಾಣಿಕೆಯ ಕೊರತೆಯು, ಮಕ್ಕಳ ಆರೈಕೆಯ ವರ್ತನೆಗಳನ್ನು ಸುಧಾರಿಸುವುದು ಮತ್ತು ಪೋಷಕರಿಗೆ ಅರಿವು ಮೂಡಿಸುವುದು (ಇದು ಹೆಚ್ಚು ಸುಸ್ಥಿರ ಪರಿಣಾಮವನ್ನುಂಟು ಮಾಡುವ ಸಾಧ್ಯತೆ ಇದೆ) ಇತ್ಯಾದಿಯ ಬದಲಿಗೆ ಪೂರಕ ಪೌಷ್ಠಿಕಾಂಶಗಳ ಮೂಲಕ ಆಹಾರ ಭದ್ರತೆಯನ್ನು ಒದಗಿಸುವುದರ ಮೇಲೆ ವಿಪರೀತ ಗಮನ ನೀಡುವುದಕ್ಕೆ ಸಂಬಂಧಿಸಿದೆ. ಹೊಂದಾಣಿಕೆಯ ಎರಡನೇ ಕೊರತೆಯು, ಎಳೆಯ ಮಕ್ಕಳ ಮೇಲೆ (ಅಂದರೆ ICDS ಕಾರ್ಯಯೋಜನೆಗಳಿಂದ ಸಂಭಾವ್ಯ ಹೆಚ್ಚಿನ ಲಾಭ ಪಡೆಯಬಲ್ಲ 3 ವರ್ಷ ವಯಸ್ಸಿನ ಕೆಳಗಿನ ಮಕ್ಕಳು) ಅಸಮರ್ಪಕ ಗಮನ ನೀಡುವುದಕ್ಕೆ ಸಂಬಂಧಿಸಿದೆ. ಹೊಂದಾಣಿಕೆಯ ಮೂರನೇ ಕೊರತೆಯು, ಹೆಚ್ಚಿನ ಕಾರ್ಯಯೋಜನೆಗಳ ಅಗತ್ಯವಿರುವ ಭೌಗೋಳಿಕ ಪ್ರದೇಶಗಳು, ಜಾತಿಗಳು ಮತ್ತು ಸಮುದಾಯಗಳ ಮೇಲೆ ಹೆಚ್ಚು ಗಮನ ನೀಡಬೇಕಾದ ಅಗತ್ಯತೆಗೆ ಸಂಬಂಧಿಸಿದೆ. ಬಲಪಡಿಸಬೇಕಾದ ಕೆಲವು ಕ್ಷೇತ್ರಗಳೆಂದರೆ, ಅತ್ಯಂತ ಬಡ ಸಮುದಾಯಗಳ ಮೇಲೆ ಗಮನ ಹರಿಸುವುದು, ಕಾರ್ಯಕ್ರಮದ ವಿನ್ಯಾಸವನ್ನು ಸಂದರ್ಭೋಚಿತಗೊಳಿಸುವುದು, ಸೇವೆ ಒದಗಿಸುವವರ ಕೆಲಸದ ಭಾರವನ್ನು ಪುನರ್ವ್ಯವಸ್ಥೆಗೊಳಿಸುವುದು, ಸೇವಾ ತಲುಪಿಸುವಿಕೆಯ ಗುಣಮಟ್ಟದ ಸುಧಾರಣೆಯ ಮೂಲಕ ಬಳಕೆಯನ್ನು ಉತ್ತೇಜಿಸುವುದು, ಹೆಚ್ಚಿನ ಹೊಣೆಗಾರಿಕೆ ಮತ್ತು ಫಲಿತಾಂಶದ ಮೇಲೆ ಗಮನ ಹರಿಸುವುದು ಮತ್ತು ಸಂಬಂಧಿತ ಕ್ಷೇತ್ರಗಳೊಂದಿಗೆ ನಿಕಟವಾಗಿ ಒಮ್ಮುಖವಾಗುವುದು ಇತ್ಯಾದಿ. (ವಿಶ್ವ ಬ್ಯಾಂಕ್, 2004)

## ಮಕ್ಕಳಿಗಾಗಿ ವಿಕೇಂದ್ರೀಕೃತ ಮತ್ತು ಸಮಗ್ರ ಯೋಜನೆ

ದತ್ತ ಭಾರತದ ವೈವಿಧ್ಯತೆ ಮತ್ತು ಪ್ರಮಾಣವನ್ನು ಆಧರಿಸಿ ಮಕ್ಕಳ ಕುರಿತ ಕಾರ್ಯಯೋಜನೆಗಳು ಯೋಜನಾ ಪ್ರಕ್ರಿಯೆ ಮತ್ತು ವಿನ್ಯಾಸವನ್ನು ಸಂದರ್ಭೋಚಿತಗೊಳಿಸುವ ಅಗತ್ಯವಿದೆ. ಯೋಜನೆ ಮತ್ತು ಅನುಷ್ಠಾನದ ವಿಕೇಂದ್ರೀಕೃತ ಮತ್ತು ಭಾಗವಹಿಸುವಿಕೆಯ ವಿಧಾನದ ಮೂಲಕ ಮಾತ್ರವೇ ಇದು ಸಾಧ್ಯ. ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರಗಳು ಈ ದಿಕ್ಕಿನಲ್ಲಿ ಈಗಾಗಲೇ ಮುಂದೆ ಸಾಗಿವೆ ಹಾಗೂ ಸ್ವಲ್ಪ ಮಟ್ಟಿಗೆ ಈ ವಿಧಾನದ ಅನುಭವವನ್ನು ಹೊಂದಿವೆ. ICDS ಸಹ ಈಗ ಹೆಚ್ಚು ವಿಕೇಂದ್ರೀಕೃತ, ಹೊಂದಿಕೊಳ್ಳುವ ಜಿಲ್ಲೆ ಆಧಾರಿತ ಚೌಕಟ್ಟಾಗಿ ಪುನರ್ರಚನೆಯಾಗುತ್ತಿದೆ. ಆದಾಗ್ಯೂ, ಇಲ್ಲಿಯತನಕ ಇದು ಅತ್ಯಂತ ಕೇಂದ್ರೀಕೃತ ಕಾರ್ಯಕ್ರಮವಾಗಿರುವುದರಿಂದ, ರಾಜ್ಯ ಮತ್ತು ಜಿಲ್ಲಾ ಕಾರ್ಯನಿರ್ವಾಹಕರ ಸಾಮರ್ಥ್ಯವನ್ನು ಗಣನೀಯವಾಗಿ ವೃದ್ಧಿಸುವ ಅಗತ್ಯವಿದೆ. ಅಲ್ಲದೆ, ಅಭಿವೃದ್ಧಿಯ ಆರೋಗ್ಯ, ಪೌಷ್ಠಿಕಾಂಶ ಮತ್ತು ಶಿಕ್ಷಣದ ಅಂಶಗಳ ನಡುವಿನ ಸಹಕ್ರಿಯೆಗಳ ಕಾರಣ, ಮುಖ್ಯವಾಗಿ ತಳ ಹಂತದಲ್ಲಿ ವಿವಿಧ ವಲಯವಾರು ಕಾರ್ಯಕ್ರಮಗಳ ಮೂಲಕ ಉಪಕ್ರಮಗಳ ಒಮ್ಮುಖಗೊಳ್ಳುವಿಕೆಯು ನಮ್ಮ ಮುಂದಿರುವ ಪ್ರಮುಖ ದಾರಿಯಾಗಿದೆ.

**References**


GoI [Government of India]. (1949) *Constitution of India*. New Delhi: Government of India.

GoI [Government of India]. (1986) *National Policy on Education* 1986. New Delhi: Ministry of Human Resource Development.

GoI. (2000) *Education for All - The Year 2000 Assessment Report: India.* New Delhi: Ministry of Human Resource Development.

GoI. (2003): *Early Childhood Care and Education in India – An Overview*. New Delhi: Ministry of Human Resource Development.

GoI. (2004) *Status of Education and Vocational Training in India 2004-05. NSS 61st Round Report no. 517, (July 2004-June 2005).* New Delhi: Ministry of Statistics and Programme Implementation.

GoI. (2006a) *Annual Report, 2004-2005.* Department of Higher Education, Ministry of Human Resource Development, New Delhi: Department of Higher Education.

GoI. (2006) *Status of Education and Vocational Training in India 2004-05. NSS 61st Round (July 2004-June 2005), Report No. 517 (16/10/3)*. New Delhi: Ministry of Statistics and Programme Implementation.

GoI. (2007): *Early Childhood Education in the Eleventh Five Year Plan (2007-2012) - Sub Group Report.* New Delhi: Ministry of Women and Child Development.

Kaul, V. (1998): The Training of Teachers. In: M. Swaminathan (ed) (1998): *The First Five Years - A Critical Perspective on Early Childhood Care and Education in India.* New Delhi: Sage Publications.

Kaul, V. (1999): *Early Childhood Care and Education in the Context of EFA.* Paper prepared for the Government of India. Education for All - The Year 2000 Assessment Report. New Delhi.

M.S. Swaminathan Research Foundation (2000): *Quality Matters - Understanding the Relationship Between Quality in Early Childhood Education and Learning Competencies of Children. An Explanatory Study in Tamil Nadu.* Research Report No. 4. Chennai.

Mehta, Arun (2007): *Elementary Education in India: Analytical Report 2005-06.* New Delhi: NUEPA.

Mustard, J. Fraser (2007): Experience Based Brain Development: Scientific Underpinnings of the importance of Early Child Development in a Global World in Young, Mary Eming (ed.) (2007) *Early Child Development from Measurement to Action: A Priority for Growth and Equity.* Washington D.C.: World Bank.

NCTE. [National Council of Teacher Education]. (2005): *Annual Report for the Year 2004-05.* New Delhi: Ministry of Human Resource Development.

NCERT. (2005a) *Seventh All India Educational Survey, Provisional Statistics as on September 30, 2002.* New Delhi: NCERT.

NCERT. [National Council of Educational Research and Training] (2005b) *National Curriculum Framework Review 2005 (Draft).* New Delhi: NCERT.

NCERT. [National Council of Educational Research and Training]. (1993): *Impact of ECE on Retention in Primary Grades – A Longitudinal Study.* New Delhi: NCERT.

NCERT. (2003): *A Study of Process and Effectiveness of Linkages between ECCE and Primary Education in the Context of SSA.* New Delhi: NCERT.

NCAER. [National Council of Applied Economic Research]. (2001): *Concurrent Evaluation of ICDS – National Report.* New Delhi: NCAER.

NIPCCD [National Institute of Public Cooperation and Child Development]. (1992) *National Evaluation of Integrated Child Development.* New Delhi: N.I.P.C.C.D.

NIPCCD. (1995): *Creche Services in India – An Evaluation.* New Delhi: N.I.P.C.C.D.

NIPCCD. (2004): *An Evaluation Study of Creches Run under National Creche Fund.* New Delhi: N.I.P.C.C.D.

Prochner, L. (2002): Pre-School and Playway in India. *Childhood,* 9(4) pp. 435-453.

Rao and Sharma (2002): Early Childhood Services in India-Challenges and Prospects for Their Development. In: Chan, K.S.L. and Mellor,E.J. (eds) (2002): *International Developments in Early Childhood Services.* New York: Peter Lang.

Sharma, A. (1998): Opportunity, Challenges and Vision. In: M. Swaminathan (Ed): *First Five Years-A Critical Perspective on ECCE in India.* New Delhi: Sage Publication.

SRI [Social and Rural Research Institute] (2005) *All India Survey of Out-Of-School Children in the 6-13 Years Age Group.* New Delhi: SRI-IMRB.

Stern, R.W (1993): *Changing India - Bourgeois Revolution on the Subcontinent*. Cambridge: Cambridge University Press.

Swaminathan. M. (1998) (ed): *The First Five Years - A Critical Perspective on Early Childhood Care and Education in India*. New Delhi: Sage Publications.

The World Bank (2004): *Reaching Out to the Child – An Integrated Approach to Child Development.* Washington, D.C.: Oxford University Press.

The World Bank (2005a): India's Undernourished Children. *A Call for Reform and Action.* Washington, D.C.: The World Bank.

The World Bank (2005b): *World Development Report 2006 - Equity and Development.* Washington, D.C.: The World Bank and Oxford University Press.

UNESCO. (2002) *Education for All: Is the world on track?* Paris: UNESCO.

UNESCO. (2006): *Select Issues Concerning ECCE India.* Background paper prepared for the Education for All Global Monitoring Report 2007: Strong foundations: early childhood care and education. 2007/ED/EFA/MRT/PI/23. New Delhi: NIPCCD/UNESCO.